ಅಮರ ಬಾಪು ಚಿಂತನ

ಸಂಪುಟ-3 ಸಂಚಿಕೆ-7 ಜುಲೈ-ಆಗಸ್ಟ್ 2016



Head Office
**AMARA BAAPU CHINTANA**
Gandhi Bhavana, Kumara Park East, Bangalore-560 001
080 – 22202228, 22261967
Mobile : 94480 42653, 98800 60354
E-mail : amarabaapuchintana@gmail.com
Visit us at : www.amarabaapuchintana.com
facebook.com/amarabaapuchintana



# ಚರಿತ್ರೆಯ ಎಚ್ಚರಿಕೆ

70ನೇ ಸ್ವಾತಂತ್ರ್ಯೋತ್ಸವದ ಸಂಭ್ರಮಕ್ಕೆ ಅಣಿಯಾಗುತ್ತಿದ್ದೇವೆ. ಈ ಸ್ವಾತಂತ್ರ್ಯ ಅಸಂಖ್ಯಾತ ಬಲಿದಾನದ ಫಲ. 1600ರಲ್ಲಿ ದಿಲ್ಲಿ ಬಾದಶಹನ ದರ್ಬಾರಿನಲ್ಲಿ ಕೈ ಕಟ್ಟಿನಿಂತು, ವ್ಯಾಪಾರಕ್ಕಾಗಿ ಅನುಮತಿ ಬೇಡಿದ, ಕೆಲವೇ ವರ್ಷಗಳಲ್ಲಿ ತಮ್ಮ ವ್ಯಾಪಾರಿ ವೃತ್ತಿಯಿಂದ ಇಡೀ ಭಾರತ ಭೂಮಿಯನ್ನೇ ಆಕ್ರಮಿಸಿಕೊಂಡರು. ಈ ದೇಶದ ಆಡಳಿತ ವ್ಯವಸ್ಥೆ ಮತ್ತು ಸಮಾಜ ಬ್ರಿಟಿಷ್ ಸಾಮ್ರಾಜ್ಯದ ಗುಲಾಮರಾಗಬೇಕಾಯಿತು. ಸಾವಿರಾರು ಮೈಲಿಗಳ ಅಂತರದಲ್ಲಿದ್ದು ಕೋಟಿ ಕೋಟಿ ಭಾರತೀಯರಲ್ಲಿ ಕೆಲವೇ ಕೆಲವು ಭಾರತೀಯರನ್ನೇ ಬಳಸಿಕೊಂಡು, ಆಡಳಿತ ನಡೆಸಿದ್ದರು. 1857ರಲ್ಲಿ ಮಂಗಲಪಾಂಡೆ, ರಾಣಿಲಕ್ಷ್ಮಿಬಾಯಿ, ತಾತ್ಯಾಟೋಪೆ ನೇತೃತ್ವದಲ್ಲಿ ಇಡೀ ಭಾರತ ಸಂಘಟಿತರಾಗಿ ಹೋರಾಟ ನಡೆಸಲು ಒಂದು ಪ್ರಯತ್ನ ನಡೆಸಿತು. ಆದರೆ, ಫಲಸಿಗಲಿಲ್ಲ, ಅಲ್ಲಿಂದ 1947ರವರೆಗೂ ಸತತವಾದ, ವಿರೋಧ, ಹೋರಾಟ, ಚಳವಳಿ ಬಲಿದಾನಗಳ ಫಲವಾಗಿ ಸಿಕ್ಕಿದ್ದು ಇಂದಿನ ಈ ಸ್ವಾತಂತ್ರ್ಯ, ಇದಕ್ಕಾಗಿ ಅಹಿಂಸಾತ್ಮಕ ಚಳವಳಿಯ ರೂವಾರಿ ಮಹಾತ್ಮಗಾಂಧೀಜಿಯವರು 30 ವರ್ಷಕ್ಕಿಂತ ಹೆಚ್ಚುಕಾಲ ಸತತವಾಗಿ ಅನ್ನ, ನಿದ್ರೆ ವಿಶ್ರಾಂತಿ ಸರ್ವಸ್ವವನ್ನು ತೊರೆದು ಹೋರಾಡಿದ ಫಲ ಈ ಸ್ವಾತಂತ್ರ್ಯ. ಕಿತ್ತೂರು ಚನ್ನಮ್ಮ, ಸಂಗೊಳ್ಳಿ ರಾಯಣ್ಣ, ವೀರ ಪಾಂಡ್ಯ ಕಟ್ಟ ಬೊಮ್ಮನ್, ಸುಭಾಷ್ ಚಂದ್ರಬೋಸ್, ಚಂದ್ರಶೇಖರ ಆಜಾದ್, ಭಗತ್ ಸಿಂಗ್, ಸುಖದೇವ್, ರಾಜಗುರು, ಬಿಪಿನ್ ಚಂದ್ರಪಾಲ್ ಹೀಗೆ ಅನೇಕ ದೇಶಭಕ್ತರ ಬಲಿದಾನಗಳ ತ್ಯಾಗ ಹೋರಾಟದ ಫಲ 1947ರ ಸ್ವಾತಂತ್ರ್ಯ, ಇದಕ್ಕಾಗಿ ಭಾರತೀಯ ದೇಶಭಕ್ತರು ತೆತ್ತ ಬೆಲೆ ಅಪಾರ.

ಇಂಥಾ ಸ್ವಾತಂತ್ರ್ಯಕ್ಕಾಗಿ ಸತತವಾಗಿ 30 ವರ್ಷ ಹೋರಾಡಿದ ಗಾಂಧೀಜಿಯವರು, ಪ್ರಥಮ ಸ್ವಾತಂತ್ರ್ಯೋತ್ಸವದಲ್ಲಿ ಪಾಲ್ಗೊಳ್ಳಲಿಲ್ಲ. ಅವರ ಅನುಪಸ್ಥಿತಿ ಯಾರಿಗೂ ಏನು ಅನಿಸಲಿಲ್ಲವೇ? ಹೋಗಲಿ ಅವರು ಬಯಸಿದ ಸ್ವಾತಂತ್ರ್ಯವಾದರೂ ನಮಗೆ ಸಿಕ್ಕಿದೆಯೇ? ಅವರ ಗ್ರಾಮಸ್ವರಾಜ್ಯ ರಾಮರಾಜ್ಯದ ಕನಸು ಬರೀ ಕನಸಾಗಿಯೇ ಉಳಿಯಿತೆ? ಅರ್ಧ ರಾತ್ರಿಯಲ್ಲಿ ಹೆಣ್ಣು ಸುರಕ್ಷಿತವಾಗಿ ಒಂಟಿಯಾಗಿ ಓಡಾಡುವಂತಿರಬೇಕು ಎಂದಿದ್ದ ಅವರ ಆಶಯ ಏನಾಯಿತು? ಇಂದು ಕಿಶೋರ ವಯಸ್ಸಿನಿಂದ, ವೃದ್ಧರವರೆಗೆ, ತಂದೆ, ಸಹೋದರ, ತಂಗಿ ಎಂಬ ಸಂಬಂಧಗಳ ಭಾವನೆಗಳಿಲ್ಲದ, ಸಮಾಜವನ್ನು ತಿದ್ದಬೇಕಾದ ಉನ್ನತ ಭಾವನೆಯ ಶಿಕ್ಷಕರು, ಸಮಾಜದ ರಕ್ಷಣೆಯ ಹೊಣೆ ಹೊತ್ತ ಆರಕ್ಷಕರ ದುರ್ವರ್ತನೆಗಳು ದಿನೇ ದಿನೇ ನೋಡಿದರೆ, ಇಂಥಾ ಸ್ವೇಚ್ಛಾಚಾರ, ಅತ್ಯಾಚಾರಗಳ, ಸ್ವಾತಂತ್ರ್ಯವನ್ನೇ ನಾವು ಬಯಸಿದ್ದೇವೆಯೆ ಎಂದು ಅನಿಸುತ್ತದೆ.

ಅಂದು ಮೊಘಲರು ಫ್ರೆಂಚರು ಡಚ್ಚರು ಬ್ರಿಟಿಷರು ಮುಂತಾದ ಪರಕೀಯರು ದೇಶವನ್ನು ಕೊಳ್ಳೆ ಹೊಡೆದಿದ್ದರೆ, ಇಂದು ನಮ್ಮವರೇ ಪರಕೀಯರಿಗಿಂತ ಇಮ್ಮಡಿಯಾಗಿ ಕೊಳ್ಳೆಹೊಡೆಯುತ್ತಿದ್ದಾರೆ. ಭ್ರಷ್ಟಾಚಾರದಲ್ಲಿ ನೇರವಾಗಿ ಸಿಲುಕಿದ ನಾಯಕರುಗಳು, ಇನ್ನೊಬ್ಬರು ಮಾಡಿದ ತಪ್ಪನ್ನು ತೋರಿಸಿ, ಅವರು ಮಾಡಿಲ್ಲವೇ ಎಂದು ತಾವು ಮಾಡಿದ್ದನ್ನು ಸಮರ್ಥಿಸಿಕೊಳ್ಳುವ ಪರಿಪಾಠ ಅವರ ನಿರ್ಲಜ್ಜನವನ್ನು ತೋರಿಸುತ್ತದೆ.

ಒಂದು ಈಸ್ಟ್ ಇಂಡಿಯಾ ಕಂಪನಿ ಭಾರತಕ್ಕೆ ಬರಲು ಅನುಮತಿ ನೀಡಿದ ಫಲ, 347 ವರ್ಷಗಳ ದಾಸ್ಯ ಗುಲಾಮಿತನ! ಇಂದು ಬಹು ರಾಷ್ಟ್ರೀಯ ಸಂಸ್ಥೆಗಳನ್ನು ತಾವೇ ಕರೆದು, ಇಲ್ಲಿ ಬೆಳೆಯಲು ಮಣೆ ಹಾಕುತ್ತಿರುವುದು, ನಿಧಾನವಾಗಿ ಅಕ್ಟೋಪಸ್‌ನಂತೆ ಇಡೀ ದೇಶವನ್ನು ವ್ಯಾಪಿಸಿ ಮತ್ತೆ ಗುಲಾಮಿತನದತ್ತ ದೂಡುತ್ತಿದೆ. ಅಂದು ಪರಕೀಯರು ಕೊಳ್ಳೆ ಹೊಡೆದದ್ದುಕ್ಕಿಂತ ಹೆಚ್ಚು ಸಂಪತ್ತನ್ನು ಸ್ವದೇಶಿಯರೇ ಕೊಳ್ಳೆ ಹೊಡೆದು ಪರದೇಶದ(ವಿದೇಶಿ) ಬ್ಯಾಂಕ್‌ಗಳಲ್ಲಿ ಇಟ್ಟಿರುವುದು ನಾಚಿಕೆಗೇಡಿನ ಸಂಗತಿ.

ಇಂದು ಭಾರತದ ಗಡಿಗಳಲ್ಲಿ ಶತ್ರುರಾಷ್ಟ್ರಗಳಾದ ಪಾಕಿಸ್ಥಾನ, ಬಾಂಗ್ಲಾದೇಶ, ಚೀನಾಗಳಂತಹ ದೇಶಗಳು ತಮ್ಮ ಗೋಸುಂಬೆತನವನ್ನು ಪ್ರದರ್ಶಿಸುತ್ತಿದ್ದು, ದೇಶದ ಆರ್ಥಿಕ, ಸಾಮಾಜಿಕ ವ್ಯವಸ್ಥೆಗಳನ್ನು ನಾಶ ಮಾಡಲು ಸರ್ವ ಪ್ರಯತ್ನ ನಡೆಸುತ್ತಿವೆ. ದೇಶದಲ್ಲಿ ಹಿಂಸೆ ಅಶಾಂತಿ, ಅತ್ಯಾಚಾರ, ಅನಾಚಾರಗಳನ್ನು ಹುಟ್ಟುಹಾಕುವುದರ ಮೂಲಕ ದೇಶದ ಆಂತರಿಕ ಭದ್ರತೆಯನ್ನೇ ನೆಲಸಮ ಮಾಡುತ್ತಿದೆ. ಕಳ್ಳಸಾಗಾಣಿಕೆ ಕಳ್ಳಸಂತೆ, ಕಪ್ಪುಹಣ, ಕಳ್ಳನೋಟಗಳ ಚಲಾವಣೆಯಿಂದ ದೇಶದ ಅರ್ಥವ್ಯವಸ್ಥೆಯನ್ನೇ ಅಲುಗಾಡಿಸುತ್ತಿವೆ. ಇಂಥಾ ಸಂದರ್ಭಗಳಲ್ಲಿ ಪ್ರತಿಯೊಬ್ಬ ಭಾರತೀಯರೂ ಧರ್ಮ, ಜಾತಿ, ಪಕ್ಷ, ಪಂಥ ಎಲ್ಲ ಬೇಧಗಳನ್ನು ಮರೆತು ಒಗ್ಗಟ್ಟನ್ನು ಪ್ರದರ್ಶಿಸುವುದು ಇಂದು ಅನಿವಾರ್ಯ.

ಇಂಥಾ ಸಂಕಷ್ಟದ ಸಮಯದಲ್ಲಿ ಚರಿತ್ರೆಯಿಂದ ನಾವು ಪಾಠ ಕಲಿಯದೇ ಇದ್ದಲ್ಲಿ ದೇಶದ ಸರ್ವನಾಶ, ಸ್ವಾತಂತ್ರ್ಯದ ಹರಣವಾದೀತು ಎಚ್ಚರಿಕೆ.

ಜೀರಿಗೆ ಲೋಕೇಶ್





# ಗಾಂಧೀ ಸ್ಮೃತಿ



ಭಾರತದಾ ದೇಶದಲಿ
ಸುಸಂಸ್ಕೃತಿಯ ನಾಡಿನಲಿ
ಜನಿಸಿದೆ ನೀ ಮನುಜನಾಗಿ
ಮಡಿದೆ ನೀ ಮಹಾತ್ಮನಾಗಿ.

ಸತ್ಯ, ಅಹಿಂಸೆಯ ಬೀಜ ಬಿತ್ತಿದೆಯಿಲ್ಲಿ
ಅವು ಮೊಳೆಯದೇ ಕೊಳೆತವಿಲ್ಲಿ
ಅಸತ್ಯ, ಹಿಂಸೆಯ ಮಾರ್ಗವಾಗಿ
ಬೆಳೆದರು ರಾಜಕಾರಣಿಗಳು ಮುಖಂಡರಾಗಿ.

ಜಾತಿ, ಮತ ಬೇಡವೆಂದಿಲ್ಲಿ
ಒಂದಕ್ಕೆರಡು ಜಾತಿ ಉದಯಿಸಿದವಿಲ್ಲಿ
ನಿನ್ನ ಜನತೆಯ ಮೌಢ್ಯತೆಯಿಂದಾಗಿ
ನಾಗರೀಕರ ಅನಾಗರೀಕತೆಯಿಂದಾಗಿ.

ಆಗ ಭಿನ್ನತೆಯಲ್ಲಿ ಏಕತೆ ಬಯಸಿದೆಯಿಲ್ಲಿ
ಈಗ ಏಕತೆಯಲ್ಲಿ ಭಿನ್ನತೆಯಾಗಿದೆಯಿಲ್ಲಿ
ಸಂಕುಚಿತ ಜನತೆಯಿಂದಾಗಿ
ಸ್ವಾರ್ಥತೆಯ ಮನೋಭಾವದಿಂದಾಗಿ.

ರಾಮ ರಾಜ್ಯದ ಕನಸು ಕಂಡೆಯಿಲ್ಲಿ
ರಾವಣ ರಾಜ್ಯ ನನಸಾಗಿದೆಯಿಲ್ಲಿ
ದೌರ್ಜನ್ಯ ಸಹಿಸಿ ಬದುಕಿರುವ ಬಡವನಿಗಾಗಿ
ಬದುಕಿರುವೆ ನಾ ವಿಚಾರವಾದಿಯಾಗಿ.

**– ವೆಂಕಟೇಶ ಕೆ. ಜನಾದ್ರಿ, ಕನಕಗಿರಿ**

# ಗಾಂಧೀಜಿಯ ಸತ್ಯಾಗ್ರಹದ ಶಕ್ತಿ



ದಕ್ಷಿಣ ಆಫ್ರಿಕಾದಲ್ಲಿ ವರ್ಣ ಭೇದ ನೀತಿ ವಿರುದ್ಧ ಸತ್ಯಾಗ್ರಹ ಬಳಸಿ ಜಯಶಾಲಿಯಾದ ಗಾಂಧೀಜಿ ಭಾರತಕ್ಕೆ ಹಿಂತಿರುಗಿದರು. ಬಂದ ಕೂಡಲೇ ಇಲ್ಲಿನ ಸಮರ ಅವರನ್ನು ಆಕರ್ಷಿಸಿತು. ತಮ್ಮ ಹಿಂದಿನ ಅನುಭವವನ್ನು ಹೊಂದಿಸಿ ಸೂಕ್ತ ಕಾರ್ಯಕ್ರಮಗಳನ್ನು ಚಿಂತಿಸಿದರು. ಎರಡು ಪ್ರಯೋಗಗಳು ಮುಂದಾದವು. ಮೊದಲನೆಯದು ಹರತಾಳ. ಅದನ್ನು ರಾಷ್ಟ್ರಾದ್ಯಂತ ಆಚರಿಸಿದಲ್ಲಿ ನಿತ್ಯ ಜೀವನಕ್ಕೆ ಸಂಬಂಧಿಸಿದ ಎಲ್ಲಾ ಚಟುವಟಿಕೆಗಳನ್ನು ಆ ದಿನ ತ್ಯಜಿಸುವುದು ಸ್ವರಾಜ್ಯ ಹಂಬಲ ವ್ಯಾಪಕವೆಂದು ಜನಾಧಾರಿತವೆಂದು ಭಾಸವಾಗುತ್ತದೆಂದು ಊಹಿಸಿದರು. ಅಷ್ಟೇ ಅಲ್ಲ ಇದರಿಂದ ನವಶಕ್ತರೂಪಗೊಂಡಿತೆಂದು ಆಶಿಸಿದರು. ರಾಜಕಾರಣದಲ್ಲಿ ಹರತಾಳ ಅಹಿಂದು ನವೀನ ಅಸ್ತ್ರವಾಗಿ ಪರಿಣಮಿಸಿತು. ಅಹಿಂಸಾಯುತ ಪ್ರತಿಭಟನೆಯಲ್ಲಿ ಪ್ರಥಮ ಪ್ರಯೋಗ ಈ ಕಾರ್ಯ ಬಹುಯಶಸ್ವಿಯಾಗಲು ಶ್ರಮಿಸಿದ ಇವರನ್ನು ನೆನೆಯಬಹುದು. ರಾಜಾಜಿ ಮತ್ತು ಸರೋಜಿನಿನಾಯ್ಡು.

ಮತ್ತೊಂದು ಕಾರ್ಯಕ್ರಮ ಪರದೇಶಿ ಬಟ್ಟೆಗಳ ಬಹಿರಂಗ ದಹನ ಪರಾವಲಂಬನೆ ಮತ್ತು ಪರರ ವ್ಯಾಮೋಹಗಳ ಪ್ರತೀಕವಾಗಿದ್ದ ಪರದೇಶಿ ಬಟ್ಟೆಗಳ ನಾಶ ಜನತೆಯಲ್ಲಿ ಸ್ವದೇಶೀ ಭಾವನೆ ಮಾತ್ರವಲ್ಲ ರಾಷ್ಟ್ರೀಯತೆಯನ್ನು ಬಲಪಡಿಸೀತೆಂದು ನಂಬಿದ್ದರು. ಜೊತೆಗೆ ಮತ್ತೊಂದು ಪರಿಣಾಮ ಉಂಟು. ರಾಷ್ಟ್ರ ಕಾರ್ಯದಲ್ಲಿ ತಾವು ಪಾಲ್ಗೊಳ್ಳುತ್ತಿದ್ದೇವೆಂಬ ಕರ್ತವ್ಯ ನಿಷ್ಠೆ ನಂದೀತು. ಸ್ವರಾಜ್ಯ ಚಳುವಳಿ ಜನತಾ ಚಳುವಳಿಯಾದೀತು.

ಜಲಿಯನ್ ವಾಲಾಬಾಗಿನಲ್ಲಿ ಜನರಲ್ ಡೈಯರ್ ನಡೆಸಿದ ಅಮಾನುಷ ಹತ್ಯಾಕಾಂಡವನ್ನು ಖಂಡಿಸಿ ಅಲ್ಲಿಗೆ ಹೋಗಿ ನೋಡಲು ಗಾಂಧೀಜಿ ನಿರ್ಧರಿಸಿದರು. ಸರ್ಕಾರ ಅವರನ್ನು ತಡೆಯಲು ನಿಷೇಧಾಜ್ಞೆ ವಿಧಿಸಿತು. ಆ ಆಜ್ಞೆಯನ್ನು ಉಲ್ಲಂಘಿಸಿ ಪಂಜಾಬು ಪ್ರವೇಶಿಸಿದರು, ದಸ್ತಗಿರಿಯಾದರು. ನಾಗರೀಕ ಹಕ್ಕುಗಳ ಉಲ್ಲಂಘನೆಗೆ ಅವಕಾಶ ಕೊಡಕೂಡದೆಂಬ ನವೀನ ರೀತಿಯ ಪ್ರತಿಭಟನೆಯನ್ನು ಪ್ರಯೋಗಿಸಿದರು. ಅಲ್ಲಿಂದ ಈ ಪ್ರಯೋಗ ಸ್ವರಾಜ್ಯ ಚಳುವಳಿಯ ಅಂಗವಾಯಿತು. ಇದೇ ಹಿನ್ನೆಲೆಯಲ್ಲಿ ಶಾಸನಭಂಗ ಚಳುವಳಿಯನ್ನು ಹುಟ್ಟುಹಾಕಿದರು. ಅವರ ಕಾರ್ಯಕ್ರಮಗಳ ಉದ್ದೇಶ ಬ್ರಿಟೀಷರ ಅಧಿಕಾರ ನಿರ್ವಹಣೆಗೆ ಜನಸಮ್ಮತಿ ಇಲ್ಲವೆಂದೂ ಜನವಿರೋಧ ಇದೆಯೆಂದೂ ತೋರುವುದೇ ಆಗಿತ್ತು.

ಮತ್ತೊಂದು ಬಗೆಯ ಸತ್ಯಾಗ್ರಹ ಬಹುವ್ಯಾಪಕ, ವಿಶಿಷ್ಟ ರಾಷ್ಟ್ರೀಯ ಧ್ವಜ ಆರೋಹಣ ಕೂಡದೆಂದರೆ ಮಾಡುವುದು. ಸಭೆಗಳನ್ನು ನಡೆಸಕೂಡದೆಂದರೆ ನಡೆಸುವುದು, ಮಾತಾಡ ಕೂಡದೆಂದರೆ ಮಾತಾಡುವುದು, ಗಾಂಧಿ ಟೋಪಿ ಹಾಕಿಕೊಂಡು ಓಡಾಡ ಕೂಡದೆಂದರೆ ಓಡಾಡುವುದು. ಜಯಕಾರ ಮಾಡಕೂಡ-ದೆಂದರೆ ಮಾಡುವುದು ಇತ್ಯಾದಿ. ಇದರಿಂದ ಸರ್ಕಾರಕ್ಕೆ ನಿರ್ಲಕ್ಷ್ಯ ತೋರಿದಂತಾಯಿತು. ಅದರ ಆಜ್ಞೆಗಳಿಗೆ ತಿರಸ್ಕಾರ ಕೊಟ್ಟಂತಾಯಿತು. ಉಲ್ಲಂಘನೆ ಕಾರಣದಿಂದ ಸೆರೆವಾಸ ಅನುಭವಿಸಬೇಕಾದರೆ ಅನುಭವಿಸಿ ಮತ್ತೆ ಮತ್ತೆ ಪ್ರತಿಭಟನೆ. ಇದರಿಂದಾಗಿ ದಮನ ಸ್ವರಾಜ್ಯ ಆಕಾಂಕ್ಷೆಯನ್ನು ಅದುಮಿಡಲಾರದೆಂದು ಸಿದ್ಧಪಡಿಸಿದಂ-ತಾಯಿತು. ಗಾಂಧೀಜಿ ಜನಶಕ್ತಿ ಉಂಟು ಮಾಡಲು ಈ ಪ್ರಯೋಗಗಳನ್ನೆಲ್ಲಾ ಬಳಸಿದರು.

ಅಸಹಕಾರ ಚಳುವಳಿಯಲ್ಲಿ ಜನಶಕ್ತಿ ಅಧಿಕಾರಿಗಳಿಗೆ ಗೋಚರವಾದೀತೆಂದು ಗ್ರಹಿಸಿದರು. ನಮ್ಮ ಸಹಕಾರದಿಂದ ಆಡಳಿತ ನಡೆಯುವಷ್ಟೆ ಅದನ್ನು ಹಿಂತೆಗೆದುಕೊಂಡಲ್ಲಿ ಆಡಳಿತ ದಿಕ್ಕುಕಾಣದೆಂದರು.

ಶಾಲಾ ಕಾಲೇಜಿನಿಂದ ಮಕ್ಕಳನ್ನು ಹಿಂದಕ್ಕೆ ಕರೆಯಿರಿ, ವ್ಯಾಯಾಮಗಳನ್ನು ಬಹಿಷ್ಕರಿಸಿ ಶಾಸನ ಸಭೆಗಳನ್ನು ಬಿಟ್ಟು ಹೊರಬನ್ನಿ, ಮತ್ತೆ ಹೋಗಬೇಡಿ ಆಡಳಿತಗಾರರೊಡನೆ ಸಂಪರ್ಕಿಸಿದಲ್ಲಿ ನಮ್ಮಲ್ಲಿ ಮಾನಸಿಕ ಪರಿವರ್ತನೆ ಆದೀತೆಂದೂ ಅಸಹಕಾರದ ಚಳುವಳಿ ಬಾರ್ಪೋಲಿ ತಾಲ್ಲೂಕಿನಲ್ಲಿ ಸರ್ದಾರ್ ವಲ್ಲಭಾಯಿ ಪಟೇಲ್ ಈ ಪ್ರಯೋಗ ನಡೆಸಿ ಯಶಸ್ವಿಯಾದರು. ಕರ್ನಾಟಕದ ಒಂದು ಪ್ರದೇಶದಲ್ಲಿ ಇದೇ ಪ್ರಯೋಗವನ್ನು ಸರ್ದಾರ್ ಕೆ.ಎ.ವೆಂಕಟರಾಮಯ್ಯನವರು ನಡೆಸಿ ಕೀರ್ತಿಗಳಿಸಿದರು.

ವೈಯುಕ್ತಿಕ ಅನ್ಯಾಯುಗಳನ್ನು ಸರಿಪಡಿಸಿಕೊಳ್ಳಲು ಸತ್ಯಾಗ್ರಹ ಬಳಕೆ ಉಚಿತ ಮತ್ತು ಸುಲಭವೆಂದು ಸಿದ್ಧಪಡಿಸಿಕೊಟ್ಟಿದ್ದಾರೆ. ಆದರೆ ಒಂದು ರಾಷ್ಟ್ರ ಅನ್ಯಾಯ, ಶೋಷಣೆಗಳನ್ನು ಸರಿಪಡಿಸಲು ಸತ್ಯಾಗ್ರಹ ಬಳಕೆ ಉಪಯುಕ್ತ-ವಾಗಬಲ್ಲದೆಂದರೂ ಸುಲಭವಲ್ಲದೆಂದು ಅವರು ಅರಿತಿದ್ದರು. ಅದಕ್ಕಾಗಿ ತರಬೇತಿಕೊಟ್ಟರು. ದಕ್ಷಿಣ ಆಫ್ರಿಕಾದಲ್ಲಿ ಸಾಮಾನ್ಯ ಜನ ಸತ್ಯಾಗ್ರಹಿಗಳಾದುದರ ಅನುಭವ ಅವರಿಗಿತ್ತು. ಅಂತೆಯೇ ಇಲ್ಲೂ ಸಾಧ್ಯವೆಂದು ಧೈರ್ಯತಾಳಿದರು. ಸ್ವರಾಜ್ಯಕ್ಕೆ ಸತ್ಯಾಗ್ರಹ ಬಳಸುವಾಗಲೆ ಅಗತ್ಯವಾದ ಜನಶಕ್ತಿ ಹುಟ್ಟಿಕೊಂಡಿತ್ತು. ಶಕ್ತಿ ಸಾಧನಕ್ಕೆ ತರಬೇತಿಯಲ್ಲೇ ಸ್ವರಾಜ್ಯಕ್ಕೆ ಅರ್ಹತೆಯನ್ನು ಸಂಪಾದಿಸಿಕೊಂಡರಾದೀತೆಂದು ಅರಿತಿದ್ದರು. ಸ್ವರಾಜ್ಯವೆಂದರೇನು? ಗಾಂಧೀಜಿ ದೃಷ್ಟಿಯಲ್ಲಿ ಪ್ರತಿಪ್ರಜೆಯೂ ಮೇಲಾಧಿಕಾರವನ್ನು ಧಿಕ್ಕರಿಸಿ ತನ್ನ ನ್ಯಾಯವಾದ ಹಿತವನ್ನು ಅದು ಈಡೇರಿಸುವಂತೆ ಮಾಡಿಕೊಳ್ಳುವ ಶಕ್ತಿಯೇ

ಸ್ವರಾಜ್ಯ ಸತ್ಯಾಗ್ರಹದಿಂದ ಬರುವ ಗೆಲುವನ್ನು ಶಾಶ್ವತ ಸರ್ವ ಸಮರ್ಪಕ ಹಾಗೂ ಉನ್ನತ, ಅದು ಹೃದಯ ಪರಿವರ್ತನೆಯಿಂದ ಬರುವುದರಿಂದ ಪವಿತ್ರ ವಾದುದು ಸತ್ಯಾಗ್ರಹ ಬಳಸುವವನ್ನು ಪರಿಶುದ್ಧ ಗೊಳಿಸುತ್ತದೆ ಮತ್ತು ಎದುರಾಳಿಯನ್ನು ಪರಶುದ್ಧಗೊಳಿಸುತ್ತ ಸತ್ಯಾಗ್ರಹ ಅರ್ಜಿಸುವ ಶಕ್ತಿ ಎಂದೂ ವ್ಯರ್ಥವಾಗದು. ಒಟ್ಟಿನಲ್ಲಿ ಒಂದು ನಿಲುವು ಮೂಲ ಭೂತವಾದುದು, ರಾಜ್ಯಭಾರ ತಮ್ಮ ಮೇಲೆ ನಡೆಯಲು ತಾವು ಅವಕಾಶ ಕೊಡುವುದಿಲ್ಲವೆಂದು ಪಟ್ಟು ಹಿಡಿದು ತೋರಿದಲ್ಲಿ ಅದಕ್ಕಾಗಿ ಎಲ್ಲ ತ್ಯಾಗ ಬಲಿದಾನಕ್ಕೂ ಸಿದ್ಧವಾದಲ್ಲಿ ಯಾವ ಅನ್ಯ ಅಧಿಕಾರವೂ ಸಾಗದು ಇಲ್ಲವಂತಾಗಬೇಕು.

ಏತನ್ಮಧ್ಯೆ ಎರಡನೆಯ ಮಹಾಯುದ್ಧ ಆರಂಭವಾಯಿತು. ದಿನೇ ದಿನೇ ಜಟಿಲವಾಯಿತು. ಮಿತ್ರರಾಷ್ಟ್ರಗಳು ತಮ್ಮ ಆಶೋತ್ತರವನ್ನು ಸಾರಿ ಎಲ್ಲರ ಸಹಕಾರ ಬಯಸಿದವು. ನಾಜಿ ಶತ್ರುಗಳನ್ನು ಸದೆ ಬಡಿದು ಲಕ್ಷರಿ ದರ್ಬಾರನ್ನು ತಪ್ಪಿಸಿ ಜನತಂತ್ರ ಸ್ಥಿರಗೊಳಿಸುವುದೇ ತಮ್ಮ ಗುರಿಯೆಂದು ಹೇಳಿದವು. ಆ ಆಶ್ವಾಸನೆ ಭಾರತ ಅಂದರೆ ವಸಾಹತುಗಳಿಗೂ ಅನ್ವಯಿಸುತ್ತವೆ ಎಂಬ ಶಂಕೆ ಹುಟ್ಟಿತು. ಪ್ರಧಾನಿ ಚರ್ಚಿಲಗ ಎರಡು ನುಡಿಗಳು ಆಡಿದ ಬ್ರಿಟಿಷ್ ಚಕ್ರಾಧಿಪತ್ಯ ನಶಿಸಲು ನಾವು ಮಂತ್ರಿಯಾಗಿಲ್ಲವೆಂದು ಮತ್ತು ತಮ್ಮ ವಶದಲ್ಲಿರುವುದನ್ನು ತಾವು ಇಟ್ಟುಕೊಳ್ಳುವುದಾಗಿ ಹೇಳಿದ. ಅಂಥ ಸಾಮಾಜ್ಯ ಶಾಹಿಯು ಹಿಡಿತ ತಪ್ಪುವುದನ್ನು ಕಾಣದಂತಾಯಿತು.

ಇದೇ ಹಿನ್ನೆಲೆಯಲ್ಲಿ ಸುಭಾಷ್ ಚಂದ್ರ ಬೋಸ್ ರನ್ನು ಸಹ ನೆನೆಯಹಬುದಾಗಿದೆ. ನೀತಿ ತುಂಡರಿಯಿತು. ಇದರಿಂದಾಗಿ ಸಮರ ನೀತಿ ತೀವ್ರಗತಿಯಲ್ಲಿ ಮುಂದುವರಿಯ-ಬೇಕಾಯಿತು. ಗಾಂಧೀಜಿಯನ್ನು ದಂಗೆಯೆಂದೇ ಕರೆದಿದ್ದಾರೆ.

ಈ ನವ್ಯಧಾಟಿಯನ್ನು ಯಶಸ್ವಿಗೊಳಿಸಿದ ಕೀರ್ತಿ ಜಯಪ್ರಕಾಶ ನಾರಾಯಣರನ್ನು ಅವರೊಡನೆ ದನಿಗೂಡಿಸಿ ಶ್ರಮಿಸಿದವರಲ್ಲಿ ಕರ್ನಾಟಕದ ವೀರಾಗ್ರಣಿ ಕಮಲಾದೇವಿ ಚಟ್ಟೋಪಾಧ್ಯಾಯ ಒಬ್ಬರಾಗಿದ್ದರೆಂದು ಹೇಳಲು ಹೆಮ್ಮೆಪಟ್ಟುಕೊಳ್ಳುತ್ತೇನೆ.

**ಜೈ ಹಿಂದ್**



# ಕಲಾಂರಿಗೊಂದು ಕೊನೆಯ ಸಲಾಂ...ಜಿ...

– ಡಾ॥ ಸಣ್ಣವೀರಣ್ಣ ಹಾಲಪ್ಪ ದೊಡ್ಡಮನಿ



ಕ್ಷಿಪಣಿ ಮಾನವ, ಭಾರತ ರತ್ನ, ಜ್ಞಾನ ರತ್ನ,
ಕಲಾಂರೆಂದರೆ ಗಗನದಾಚೆ ಚಾಚುವ ವಿಚಾರ ಕ್ಷಿತಿಜ
ಜ್ಞಾನಿ ವಿಜ್ಞಾನಿಯಾಗಿ ವಿಜ್ಞಾನ ದೀವಿಗೆ ಬೆಳಗಿ
ಭಾರತಾಂಬೆಯ ಕೀರ್ತಿ ಪತಾಕೆ ಆಕಾಶದತ್ತ ಎತ್ತರಿಸಿ
ಸುಜ್ಞಾನ ಬಾಗಿಲ ತೆರೆದ ಚಂದ್ರತೇಜ
ತಂಪನೆಳಲ ಇಂಪು ಸೂಸಿ ಕಂಪುಗೊಳಿಸಿದ ಸಿಂಪಿ
ಕಡಲ ರೆಕ್ಕೆಯ ಕಿನಾರೆಯಲ್ಲಿ ಆಳದಾಳ ಅಳೆವ

ಆಲೋಚನೆಗಳ ಅಂಬುಜ ಜೀವ ಸಂಕುಲ
ಅರಿತು ಮಾನವ ತುಮಲ ಮರೆತು
ರಾಮೇಶ್ವರದಿ ಜನಿಪ ನಾಡ ನಾವೆಯ
ನಾವಿಕನ ಸುತನೆನೆಸಿ ಹೆತ್ತೊಡಲ ಮಾತೆಗೆ
ಕರುಣೆಯ ಮಡಿಲ ಕಂದನೆನಿಸಿ, ಗಾಂಭೀರ್ಯ
ಮರೆತು, ಮಕ್ಕಳ ಭಾವ ತುಂಬಿ ನಕ್ಕು ನಲಿದ ಮಹಾನ್ ಮೇರು

ತಿಳಿದ ಚಿತ್ತ ಹರಿದ ನೋಟ ಪಕ್ಷಿ ಪಾರತ್ಯ
ಏರಿದವನ ಎತ್ತರಾಚೆ ಏರಿ ಏರಿದಾತ
ಚಿಕ್ಕವನಾಗಿರಬೇಕೆಂಬ ಮಾತ ಸಾರಿದಾತ
ಲಕ್ಷೋಪ ಲಕ್ಷ ಕಂದಗಳ ಮಂದಾರ
ಚುಕ್ಕಿ ಚಿತ್ತಾರ ಸಮೂಹದ ಚಂದಿರ
ಚಿತ್ರ ಬಿಡಿಸಿ ಮಕ್ಕಳ ಪಾಲಿನ ಆಂಗಾರನಾನಂದ

ಮಾತೆ ಮಂದಿರ ತೊರೆದು ಮರೆಯಾದನೆ
ಭವಿಷ್ಯ ಭಾರತದ ಭಾಷ್ಯ ಪ್ರಜ್ವಲಿಪ
ತಂತ್ರಜ್ಞಾನದ ಯುಗಾಂತರಿ ಶಿಲ್ಪಿ
ವಿಂಗ್ಸ್‌ಟು ಪಾಯಿರ್‌ನ ವೈಚಾರಿಕನೆನಿಸಿ
ಅಣು ಪರಮಾಣುಗಳ ಆವಿಷ್ಕಾರ ಮೆರೆಸಿ

ಪ್ರಾಪಂಚಿಕ ಜಾಡ್ಯಕ್ಕೆ ಸಿಗದ ವಶಿಷ್ಠ
ಭಾರತ ರತ್ನ, ಮನುಕುಲ ಚಿಂತಕ
ವಿಸ್ಮಯ ಗಾರುಡಿಗ ಕಲಾಂ
ನನ್ನ ದೇಶದೊಂದು ಸಲಾಂ
ಮಮತೆಯ ಭಾರತ ಮಾತೆಗೆ ಮರಳು
ಜ್ಞಾನ ಶರಧಿ,ಹಿರಿಯರ ಹಿರಿಯ

ಜ್ಞಾನಿಗೆ ಜ್ಞಾನಿ ಬಾಲರ ಬಾಲ ನಮ್ಮೀಲೋಲ
ಜಾತಿಮೀರಿ,ಭಾತಿಮೀರಿ ಖ್ಯಾತಿಮೀರಿ
ಮೆರೆದ ಚಿಂತನ ಚೇತನ
ಭಾವೈಕ್ಯತಾ ಮಕ್ಕಳ ಮುಕುಟಮಣಿ
ಪ್ರಣಾಂಜಿ, ಕಲಾಂಜಿ, ನಿಮಗಿದೋ ಸಲಾಂ, ಸಲಾಂ,

# ಮಾನವ ಕುಲಕ್ಕೆ ಗಾಂಧಿ ಪ್ರಸ್ತುತ

– ರಂಗನಾಥ ದಿವಾಕರ

**ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕೂಡ ಈಚೆಗೆ ಗಾಂಧಿ–ವಿಚಾರ ಪ್ರಣಾಲಿಗೆ ಹೆಚ್ಚೆಚ್ಚು ಮಹತ್ವ ಬರತೊಡಗಿದೆ. ಈಗಿನ ಪದ್ಧತಿ, ಅರ್ಥಪದ್ಧತಿ, ಸಮಾಜ ಪದ್ಧತಿ, ರಾಜ್ಯ ಪದ್ಧತಿ–ಇವೆಲ್ಲ ನಮ್ಮನ್ನು ಅಣು ಯುದ್ಧಕ್ಕೆ ತಂದಿರಿಸಿವೆಯಲ್ಲಾ ಎಂಬ ಭಯವು ಕೂಡ ಆ ರಾಷ್ಟ್ರಗಳನ್ನು ಎಚ್ಚರಿಸುತ್ತಿದೆ. ಆದುದರಿಂದ ಮಾನವ ಕುಲಕ್ಕೇ ಒಂದು ಮನ್ವಂತರ ಯುಗಾಂತರದ ಸಂದರ್ಭ ಉಂಟಾಗಿದೆ ಎನ್ನಬಹುದು. ಗಾಂಧೀಜಿ ತನ್ಮೂಲಕ ಭಾರತ, ಈ ವಿಷಯದಲ್ಲಿ ಹೆಜ್ಜೆ ಹಾಕುತ್ತ ಹೋಗುವುದು ಭಾರತದ ಪರಂಪರೆಗೆ ಸಲ್ಲುವುದಲ್ಲವೇ ?**

ಗಾಂಧೀಜಿಯವರ ಜೀವನ–ಜೀವನ ವೃತ್ತ, ಅವರ ಅತ್ಯಂತ ಸರ್ವ ವ್ಯಾಪಕವಾದ ವಿಚಾರ ಪ್ರಣಾಲಿ, ಮತ್ತು ಅವರು ತಮ್ಮ ಜೀವಮಾನದಲ್ಲಿ ಅವ್ಯಾಹತವಾಗಿ ನಡೆಸಿದ ಕಾರ್ಯಕಲಾಪಗಳು ಇವೆಲ್ಲ ಈಗ ನಮ್ಮೆಲ್ಲರ ಕಣ್ಣು ಮುಂದೆಯೇ ಇವೆ. ಇವೆಲ್ಲವುಗಳ ಮೂಲ ಸೂತ್ರವೇನು? ಅವರು ಇದ್ದದ್ದು, ವಿಚಾರಿಸಿದ್ದು, ಮಾಡಿದ್ದು ಒಂದು ದಿವ್ಯ, ಅನಂತ ಸುಂದರ ಮಣಿಮಾಲೆ ಎಂದು ಕಲ್ಪಿಸಿದರೆ ಆ ಮಣಿಗಳನ್ನು ಪೋಣಿಸಿದ ಮೂಲ ಸೂತ್ರ ಯಾವುದು?. ಆ ಸೂತ್ರದಗುಂಟ ನಾವು ಸಾಗಿದರೆ ಅವರ ಜೀವನ ರಹಸ್ಯವೇ ನಮ್ಮ ಕೈ ಸೇರುವುದು.

ಗಾಂಧೀಜಿ ಹುಟ್ಟಿದ್ದು ಭಾರತದಲ್ಲಿ. ಅವರ ಕಾರ್ಯಕ್ಷೇತ್ರ ಅಥವಾ ಕುರುಕ್ಷೇತ್ರ ಮತ್ತು ಧರ್ಮ ಕ್ಷೇತ್ರ ದಕ್ಷಿಣ ಆಫ್ರಿಕಾ ಹಾಗೂ ಈ ನಮ್ಮ ದೇಶ. ಆದರೆ ಅವರ ವಿಚಾರ ವ್ಯಾಪ್ತಿ ಹಾಗೂ ಸಂವೇದನಶೀಲತೆ ಮಾನವ ಕುಲವಷ್ಟಕ್ಕೇ ಸೀಮಿತವಿರಲಿಲ್ಲ. ಅದು ಸುಚೇತನವೆನಿಸುವ ಸಕಲ ಪ್ರಾಣಿಕುಲಕ್ಕೂ ವನಸ್ಪತಿ ಕುಲಕ್ಕೂ ಹಬ್ಬಿತ್ತು. ಮಾನವ ಕುಲ ಸರಿಯಾಗಿ ಬದುಕಿ–ಬಾಳಿ–ಬೆಳೆದು–ಬೆಳಗಬೇಕಾದರೆ ಅವುಗಳು ಕೂಡ ಆರೋಗ್ಯ ಸ್ಥಿತಿಯಲ್ಲಿರುವುದು ಅವಶ್ಯ ಎಂದು ಅವರು ಬಗೆದಿದ್ದರು. ಮಾನವ ಕುಲ ಕಾಡಿನಲ್ಲಿ ಹುಟ್ಟಿ ಗವಿಗಹ್ವರಗಳಲ್ಲಿ ಬೆಳೆದು ಹಲವಾರು ಮನ್ವಂತರಗಳನ್ನು ದಾಟಿ ಈಗ ನೂರಅರವತ್ತು ಸಂಘಟಿತ ರಾಷ್ಟ್ರವೆನಿಸುವ ಘಟಕಗಳಲ್ಲಿ ಬಾಳುತ್ತಿದೆ. ಈ ಬಗೆಯ ಮಾನವನ ಮಾನವ ಕುಲದ ಗೊತ್ತು ಗುರಿಗಳೇನು? ಮಾನವ ಈ ಬ್ರಹ್ಮಾಂಡದ ಸೃಷ್ಟಿಯಲ್ಲಿ ತನ್ನದೇ ಆದ ಒಂದು ಮಾನವ ಸೃಷ್ಟಿಯನ್ನು ನಿರ್ಮಿಸಿಕೊಂಡು ಸಾಗುತ್ತಿದ್ದಾನೆ. ಅವನು ಸರಿಯಾದ ದಾರಿಯಿಂದ ಸಾಗುತ್ತಿದ್ದಾನೆಯೇ ಎಂಬ ಯಕ್ಷ ಪ್ರಶ್ನೆಯನ್ನು ಬಿಡಿಸಲು ಗಾಂಧೀಜಿ ಸಿದ್ಧಹಸ್ತರಾಗಿ ಮುಂದುವರೆದಿದ್ದಾರೆ.

ಮಾನವನ, ಮಾನವಕುಲದ ಗೊತ್ತುಗುರಿಗಳೇನು? ಅವನೇನು ಇತರ ಪ್ರಾಣಿಗಳಂತೆ ಒಂದು ಪಂಚ ಮಹಾಭೂತಗಳ ಮೊಟ್ಟೆಯೇ? ಹಸಿದು ಕಕ್ಕರಿಸುವ ಪಂಚೇಂದ್ರಿಯಗಳ ಒಂದು ಗೊಂಚಲವೇ? ಅಥವಾ ಇವೆಲ್ಲವುಗಳನ್ನು ಸಾಧನ ಸಾಮಗ್ರಿಯನ್ನಾಗಿಸಿ ತನ್ನ ಜ್ಯೋತಿಯನ್ನು ಗುರುತಿಸಿ, ಅದರ ಸ್ವಭಾವ ಸಿದ್ಧ ಪರಮಾನಂದವೂ ಒದಗುವಂತೆ ಮಾಡಿ ನಿರಂತರ ಆನಂದ ವನದಲ್ಲಿ ವಿಹರಿಸುವುದೇ ಮಾನವನ ಗುರಿಯೇ?

ಈ ಪ್ರಶ್ನೆಗೆ ಸ್ಥಳಕಾಲಾದಿಗಳ ತಾರತಮ್ಯವಿಲ್ಲದೆ ಈವರೆಗೆ ಹುಟ್ಟಿ ಬಂದು ಹಬ್ಬಿಕೊಂಡ ಧರ್ಮಗಳು ಋಷಿ ಮುನಿಗಳು, ಸಾಧು ಸಂತರು ಒಂದು ಉತ್ತರವನ್ನು ಉನ್ನತೋನ್ನತ ಏಕಸ್ವರದಿಂದ ಕೊಟ್ಟಿದ್ದಾರಲ್ಲವೇ?

ದೇಹ, ಪಂಚೇಂದ್ರಿಯಗಳು, ಅವುಗಳ ಹಸಿವೆ–ನೀರಡಿಕೆ–ಹವ್ಯಾಸಗಳು ಮಾನವನ ಮುಖ್ಯ ಅಥವಾ ಅವಿಭಾಜ್ಯ ಅಂಗಗಳಲ್ಲ– ಅವನಲ್ಲಿರುವ ಚಿತ್ತವೇ ಮೂಲ ವಸ್ತು. ಅದರ ಅರಿವು, ಅದರ ವಿಕಾಸ ಇವೇ ಮುಖ್ಯ. ನಿತ್ಯಾನಂದದತ್ತ ಸಾಗುವುದೇ ಅದರ ದಾರಿ.

ಗಾಂಧೀಜಿ ಇದನ್ನೇ ತಮ್ಮ ವಿಚಾರ–ಉಚ್ಚಾರ–ಆಚಾರಗಳ ತಳಹದಿಯನ್ನಾಗಿ–ಟ್ಟುಕೊಂಡು ಮಾನವನು ಈಗ ನಡೆದ ದಾರಿ ಸರಿಯಲ್ಲ. ಜಡ ಸೃಷ್ಟಿಯಲ್ಲಿರುವ ಪದಾರ್ಥಗಳು, ಅವುಗಳಲ್ಲಿರುವ ಶಕ್ತಿ–ವಿಶೇಷಗಳು, ಅವುಗಳೊಡನೆ ಸಬಲ–ದುರ್ಬಲ ಹಾಗೂ ಅಜ್ಞಾನಾವೃತ–ಬಡಪಾಯಿ ಮಾನವರನ್ನು ಕೂಡ ತಮ್ಮಾಳುಗಳನ್ನಾಗಿಸಿ ತಮ್ಮ ದೇಹೇಂದ್ರಿಯಗಳ ಹಸಿವನ್ನು ತೀರಿಸುವುದಕ್ಕಾಗಿ ಹಲವೇ ಬಲಿಷ್ಠ ಜನರು ಮೆರೆಯುವುದು ನಿಜವಾದ ಮಾನವ ಸಂಸ್ಕೃತಿಯ ಲಕ್ಷಣವಲ್ಲ ಎಂದು ಸಾರಿದರು. “ಸರ್ವೋದಯ” ಎಂಬ ಅವರ ಶಬ್ದ ವಿಶೇಷವು ಅಥವಾ ಮಂತ್ರವು ಅವರ ಈ ಗುರಿಯನ್ನು ಸ್ಪಷ್ಟವಾಗಿ ಸಾರುವುದು. ಅತ್ಯಂತಿಕ–ಅಧ್ಯಾತ್ಮ ಸಾಕ್ಷಾತ್ಕಾರವನ್ನು ತಮ್ಮ ಗುರಿಯನ್ನಾಗಿ–ಟ್ಟುಕೊಂಡರೂ ಗಾಂಧೀಜಿ ಹೀನ–ದೀನ–ದುರ್ಬಲರ ಸಮಸ್ಯೆಗಳನ್ನು ಬಿಡಿಸುವುದೇ ತಮ್ಮ ಸಾಧನ ಸಂಪತ್ತು ಎಂದು ಸಾರಿದರು.





ಅವರು ಗ್ರಾಮಾಂತರಗಳಲ್ಲಿ ಬಳಲುವ ಬಡತನದ ಬೇಗೆಯಲ್ಲಿ ಬೆಂದು ಸುಣ್ಣಾಗುವ, ಪಟ್ಟಣವಾಸಿಗಳ ಶೋಷಣೆಗಳಿಗೆ ಬಲಿಯಾಗಿರುವ ಜನಜಂಗುಳಿಯ ಸೇವೆಯನ್ನು ಕೈಗೊಂಡರು. ಒಂದು ಸಾವಿರ ವರ್ಷ ದಾಸ್ಯ ಸಂಕಟದಲ್ಲಿ ಕೊಳೆಯುತ್ತಿದ್ದ ಭಾರತದ ಜನರನ್ನು ಸ್ಫೂರ್ತಿಗೊಳಿಸಿ ಅಹಿಂಸಾ ಮಾರ್ಗದಿಂದ ಸ್ವಾತಂತ್ರ್ಯವನ್ನು ಗಳಿಸಲು ಅವರು ಅನು ಮಾಡಿದರು.

ಪಾಶ್ಚಾತ್ಯವೆನಿಸುವ ಜೀವನ ಪದ್ಧತಿ, ಯಂತ್ರ-ತಂತ್ರಗಳ ಮೂಲಕ ಹಾಗೂ ಆಧುನಿಕ ವಿಜ್ಞಾನದ ಮೂಲಕ ಜಗತ್ತನ್ನೇ ಶೋಷಣೆಗೆ ಅಣಿ ಮಾಡಿದ ಕುಸಂಸ್ಕೃತಿ. ಇದು ನಿಜವಾದ ಸಂಸ್ಕೃತಿ ಅಲ್ಲವೇ ಅಲ್ಲ ಈ ಸಂಸ್ಕೃತಿ ಮಾನವ ಕುಲವನ್ನು ಅಣು ಯುದ್ಧದತ್ತ ಪ್ರವರ್ತಿಸಿ ಸರ್ವನಾಶದ ಅಡಿಪಾಯವನ್ನು ಹಾಕುತ್ತಿರುವುದನ್ನು ನಾವು ಪ್ರತ್ಯಕ್ಷ ನೋಡುತ್ತಿದ್ದೇವೆ. ಆದುದರಿಂದ ಮಾನವರು ಪರಸ್ಪರ ಸ್ನೇಹದಿಂದ, ಸಹಕಾರದಿಂದ, ಸಮಭಾವದಿಂದ ಬಾಳಿ ಬಡತನವೆಂಬ ಶಬ್ದವೇ ಇಲ್ಲದಂತೆ ಮಾಡಬಲ್ಲ ಶೋಷಣ ರಹಿತ ಆರ್ಥಿಕ-ಸಾಮಾಜಿಕ-ರಾಜಕೀಯ ವ್ಯವಸ್ಥೆಯತ್ತ ಸತ್ಯ-ಅಹಿಂಸೆಯೆಂಬ ರಾಜ ಮಾರ್ಗದಿಂದ ಸಾಗುವುದೇ ಅವನ ನಿಜವಾದ ವಿಕಾಸದ ಸಾಧನ.



# ಗಾಂಧಿ ಮತ್ತು ಮೋದಿ

ಕಳೆದ ಹತ್ತು ವರ್ಷಗಳಲ್ಲಿ ಗಾಂಧೀಜಿಯವರನ್ನು ಉಳಿದೆಲ್ಲ ರಾಜಕಾರಣಿಗಳಿಗಿಂತ ಹೆಚ್ಚು ನೆನಪು ಮಾಡಿಕೊಂಡದ್ದು ಗುಜರಾತ್ ಮುಖ್ಯಮಂತ್ರಿ ನರೇಂದ್ರ ಮೋದಿ. ಪ್ರತಿ ಚುನಾವಣೆಯ ಭಾಷಣಗಳಲ್ಲಿ ಅವರ ಬಾಯಿಯಿಂದ ಪುಂಖಾನುಪುಂಖವಾಗಿ ಗಾಂಧಿ ಹೆಸರು ಹೊರಬೀಳುತ್ತದೆ. ಕೆಲವು ವರ್ಷಗಳ ಹಿಂದೆ ಗುಜರಾತ್‌ನ ಪತ್ರಿಕೆಗಳಲ್ಲಿ ತನಗಿಂತ ಎತ್ತರದ ಲಾಠಿ ಹಿಡಿದ ಗಾಂಧೀಜಿಯ ಚಿತ್ರ ಹೊಂದಿದ್ದ ಸರ್ಕಾರಿ ಜಾಹೀರಾತು ಪ್ರಕಟವಾಗಿತ್ತು. ಅದರ ಶೀರ್ಷಿಕೆ 'ಲಾಠಿ' ಆಗಿತ್ತು (ಗಾಂಧಿ ಅಲ್ಲ). 'ಲಾಠಿ ರಕ್ಷಣೆ ಮತ್ತು ಸುಭದ್ರತೆಯ ಸಂಕೇತ, ದೌರ್ಜನ್ಯ ಮತ್ತು ಹಿಂಸೆಯ ಸಂಕೇತ ಅಲ್ಲ' ಎಂಬ ಅಡಿ ಬರಹ ಅದರಲ್ಲಿತ್ತು. ಇದು ಮೋದಿ ಕಲ್ಪನೆಯ ಗಾಂಧಿ. ಆದರೆ ಗುಜರಾತ್‌ನ ಪೋರಬಂದರ್‌ನ ಮೂರು ಮಾಳಿಗೆಗಳ ಮನೆ ಕೀರ್ತಿಮಂದಿರದಲ್ಲಿ ಪುತಲೀಬಾಯಿ ಜನ್ಮ ನೀಡಿದ್ದ ಗಾಂಧೀಜಿ ಬೇರೆಯೇ ಆಗಿದ್ದರು. ಒಬ್ಬ ದಾರ್ಶನಿಕ ಮಾತ್ರ ಕಾಣಬಲ್ಲ ಭವಿಷ್ಯದ ಚಿತ್ರವನ್ನು ಅವರು ತಮ್ಮ ಕೊನೆಯ ದಿನಗಳಲ್ಲಿ ಕಂಡಿದ್ದರು. ಅದು ಹೆಡೆ ಬಿಚ್ಚುತ್ತಿದ್ದ ಕೋಮುವಾದ ಎಂಬ ಘಟಸರ್ಪದ ಚಿತ್ರ.



ಬ್ರಿಟಿಷರ ವಿರುದ್ಧದ ಹೋರಾಟದ ಗುರು, ದಾರಿ ಮತ್ತು ಪರಿಣಾಮಗಳೆಲ್ಲದರ ಬಗ್ಗೆಯೂ ಅವರಿಗೆ ಸ್ಪಷ್ಟತೆ ಇತ್ತು. ಆದರೆ ತಮ್ಮ ಬದುಕಿನ ಕೊನೆಯ ದಿನಗಳಲ್ಲಿ ಎದುರಾದ ಹಿಂದೂ-ಮುಸ್ಲಿಮರ ನಡುವಿನ ಕೋಮುದ್ವೇಷವನ್ನು ಕಂಡು ಅವರು ಆಘಾತಕ್ಕೀಡಾಗಿದ್ದರು. ದೇಶ ವಿಭಜನೆಗೆ ಒತ್ತಾಯಿಸಿ ಮುಸ್ಲಿಂ ಲೀಗ್ 'ನೇರ ಕಾರ್ಯಾಚರಣೆ'ಗೆ ಕರೆ ಕೊಟ್ಟಾಗ ಮೊದಲು ಕೋಲ್ಕತ್ತದಲ್ಲಿ, ನಂತರ ನೌಖಾಲಿಯಲ್ಲಿ ಭುಗಿಲೆದ್ದ ಹಿಂಸಾಚಾರ ಕಂಡ ಗಾಂಧೀಜಿ ಸ್ವತಂತ್ರ್ಯ ಭಾರತದ ಭವಿಷ್ಯದ ಬಗ್ಗೆ ಆತಂಕಕ್ಕೀಡಾಗಿದ್ದರು. ಅದರ ನಂತರ ಬದುಕುವ ಆಸೆಯನ್ನೆ ಕಳೆದುಕೊಂಡವರಂತೆ ಮಾತನಾಡುತ್ತಿದ್ದರು. ನೌಖಾಲಿಗೆ ಭೇಟಿ ನೀಡಿದ್ದಾಗ ಸ್ವಾಗತಿಸಲು ಬಂದವರನ್ನು ಉದ್ದೇಶಿಸಿ ಮಾತನಾಡಿದ್ದ ಅವರು ' ನಾನಿಲ್ಲಿ ಒಂದು ವರ್ಷ ಇಲ್ಲವೇ ಅದಕ್ಕಿಂತಲೂ ಹೆಚ್ಚಿನ ಕಾಲ ಇರಬಲ್ಲೆ. ಆದರೆ ಜನರ ಭರವಸೆ ಮತ್ತು ನಿರೀಕ್ಷೆಯನ್ನು ಈಡೇರಿಸಲು ಸಾಧ್ಯವಾಗದೆ ಹೋದರೆ ಬದುಕುಳಿಯುವುದಕ್ಕಿಂತ ಸಾವೇ ಲೇಸು' ಎಂದು ಹೇಳಿದ್ದರು. ಅದಕ್ಕಿಂತ ಮೊದಲು ಹಿಂಸೆಯ ಬೆಂಕಿಯಿಂದ ಧಗಧಗಿಸುತ್ತಿದ್ದ ನೌಖಾಲಿಗೆ ಹೊರಟಿದ್ದ ಅವರನ್ನು ತಡೆಯಲು ಬಂದವರ ಜೊತೆ ಮಾತನಾಡಿದ್ದ ಗಾಂಧೀಜಿ 'ನನ್ನನ್ನು ಈವರೆಗೆ ಬದುಕಿಸಿದ ಮತ್ತು ಆ ಬದುಕನ್ನು ಅರ್ಥಪೂರ್ಣ- ವಾಗಿಸಿದ್ದ ಸಿದ್ಧಾಂತದ ಸತ್ವಪರೀಕ್ಷೆಗಾಗಿ ಮತ್ತು ಹೊಸ ಕಾರ್ಯತಂತ್ರದ ಶೋಧಕ್ಕಾಗಿ

ಅಲ್ಲಿಗೆ ಹೊರಟಿದ್ದೇನೆ' ಎಂದು ಹೇಳಿದ್ದರು.

ಹಿಂದೂ–ಮುಸ್ಲಿಂ ಸೌಹಾರ್ದ ಅವರಿಗೆ ಇನ್ನೊಂದು ರಾಜಕೀಯ ಕಾರ್ಯಕ್ರಮವಾಗಿರಲಿಲ್ಲ, ಜೀವನ ವಿಧಾನವಾಗಿತ್ತು. ಇದರಿಂದಾಗಿಯೇ ಕೋಮುಸಾಮರಸ್ಯವನ್ನು ಅವರು ಕೊನೆಯ ದಿನಗಳಲ್ಲಿ ಜೀವನ್ಮರಣದ ಪ್ರಶ್ನೆಯಾಗಿಯೇ ಸ್ವೀಕರಿಸಿದ್ದರು. ಸುಮಾರು ಆರು ಸಾವಿರ ಜನ ಪ್ರಾಣ ಕಳೆದುಕೊಂಡಿದ್ದ ಕೋಲ್ಕತ್ತ ಕೋಮು–ಗಲಭೆಯ ನಂತರ ಪ್ರತೀಕಾರ ರೂಪದಲ್ಲಿ ನೌಖಾಲಿಯಲ್ಲಿ ಪ್ರಾರಂಭವಾದ ಕೋಮು ಸೇಡಿನ ಜ್ವಾಲೆಯನ್ನು ನಂದಿಸುವುದು. ಗಾಂಧೀಜಿಯವರ ಕೈಯನ್ನೂ ಮೀರಿದ್ದು ಎಂದು ಎಲ್ಲರೂ ಭಾವಿಸಿದ್ದರು. ಕಾಂಗ್ರೆಸ್‌ನ ಉಳಿದ ನಾಯಕರೆಲ್ಲ ದೆಹಲಿಯಲ್ಲಿ ಕೂತು ಸ್ವಾತಂತ್ರ್ಯ ದೇವತೆಯ ಸ್ವಾಗತಕ್ಕೆ ಸಿದ್ಧತೆ ನಡೆಸುತ್ತಿದ್ದಾಗ ಗಾಂಧೀಜಿ ತಮ್ಮ ಕೆಲವು ಆಪ್ತರನ್ನಷ್ಟೇ ಜತೆಯಲ್ಲಿಟ್ಟುಕೊಂಡು ಗಲಭೆ ಪೀಡಿತ ನೌಖಾಲಿಯಲ್ಲಿ ಪಾದಯಾತ್ರೆ ನಡೆಸಿದ್ದರು. ಏಳು ವಾರಗಳ ಕಾಲ 116 ಮೈಲು ಕ್ರಮಿಸಿ ಅಲ್ಲಿನ 47 ಗ್ರಾಮಗಳಿಗೆ ಅವರು ಭೇಟಿ ನೀಡಿದ್ದರು. ಅಸಾಧ್ಯ ಎನಿಸಿದ್ದು ಸಾಧ್ಯವಾಗಿತ್ತು. ಮುಸ್ಲಿಮರೇ ಬಹು ಸಂಖ್ಯೆಯಲ್ಲಿರುವ ನೌಖಾಲಿಯಲ್ಲಿ ನಂತರದ ದಿನಗಳಲ್ಲಿ ಕೋಮುಗಲಭೆ ನಡೆಯಲಿಲ್ಲ.

ಆದರೆ ನೌಖಾಲಿಯ ಯಶಸ್ಸಿನ ಖುಷಿ ಬಹಳ ದಿನ ಗಾಂಧೀಜಿಯವರಲ್ಲಿ ಉಳಿಯಲಿಲ್ಲ. ಸ್ವಾತಂತ್ರ್ಯ ಸಿಕ್ಕ ಒಂದು ತಿಂಗಳ ಅವಧಿಯಲ್ಲಿ ಕೋಲ್ಕತ್ತ ಮತ್ತೆ ಕೋಮುಗಲಭೆಗೆ ಆಹುತಿಯಾಗಿತ್ತು. ಈ ಬಾರಿ ಅವರು 'ಮಾಡು ಇಲ್ಲವೇ ಮಡಿ' ಎನ್ನುವ ತೀರ್ಮಾನಕ್ಕೆ ಬಂದಿದ್ದರು. ಅದರಂತೆ ಆಮರಣಾಂತ ಉಪವಾಸ ಕೈಗೊಳ್ಳಲು ನಿರ್ಧರಿಸಿದರು. ಕೇವಲ 73 ಘಂಟೆಗಳ ಉಪವಾಸದ ಮೂಲಕವೇ ಗಾಂಧೀಜಿ ಕೋಲ್ಕತ್ತದಲ್ಲಿ ಶಾಂತಿ ಸ್ಥಾಪನೆ ಮಾಡಿದ್ದರು. ಕೋಲ್ಕತ್ತದ ಹಿಂದೂ ಮತ್ತು ಮುಸ್ಲಿಮರು ಒಟ್ಟಾಗಿ ಬಂದು 'ಇನ್ನೆಂದು ಕೋಮುಗಲಭೆಗೆ ಅವಕಾಶ ನೀಡುವುದಿಲ್ಲ, ಅಂತಹದ್ದೇನಾದರೂ ನಡೆದರೆ ಪ್ರಾಣ ಕೊಟ್ಟಾದರೂ ಅದನ್ನು ತಡೆಯುತ್ತೇವೆ'. ಎಂದು ಭರವಸೆ ನೀಡಿದ್ದರು.

ಜೀವನದ ಕೊನೆಯ ಉಪವಾಸವನ್ನೂ ಅವರು ಕೈಗೊಂಡಿದ್ದು ಕೂಡಾ ಕೋಮು ಸೌಹಾರ್ದತೆಗಾಗಿ. ಆಗ ಉಳಿದೆಲ್ಲ ಕಡೆ ಕೋಮುಗಲಭೆ ನಿಯಂತ್ರಣಕ್ಕೆ ಬರುತ್ತಿದ್ದರೂ ರಾಜಧಾನಿ ದೆಹಲಿ ಮಾತ್ರ ಹೊತ್ತಿ ಉರಿಯುತ್ತಲೇ



ಇತ್ತು. ಅದೇ ವೇಳೆ ವಿಭಜನೆಯ ಕಾಲದ ಒಪ್ಪಂದದಂತೆ ತಮಗೆ ಸಂದಾಯ ವಾಗಬೇಕಾಗಿದ್ದ ಬಾಕಿ 55 ಕೋಟಿ ರೂಪಾಯಿ ಪಾವತಿಸುವಂತೆ ಪಾಕಿಸ್ತಾನ ಒತ್ತಾಯಿಸುತ್ತಿತ್ತು. ಆದರೆ ಕಾಶ್ಮೀರ ವಿವಾದ ಇತ್ಯರ್ಥವಾಗದೆ ಈ ಹಣವನ್ನು ಪಾವತಿ ಮಾಡಬಾರದೆಂಬ ಒತ್ತಡ ಸರ್ಕಾರದ ಮೇಲಿತ್ತು. ಇದರಿಂದ ದೇಶದೊಳಗೂ ಬಿಗುವಿನ ಪರಿಸ್ಥಿತಿ ನಿರ್ಮಾಣವಾಗಿ ಕೋಮುಗಲಭೆ ಸ್ಫೋಟಗೊಳ್ಳುವ ಸೂಚನೆ ಕಂಡ ಗಾಂಧೀಜಿ ಕೋಮುಸೌಹರ್ದಕ್ಕಾಗಿ ಉಪವಾಸ ಪ್ರಾರಂಭಿಸಿಯೇ ಬಿಟ್ಟರು. 1924ರಲ್ಲಿ ಮೊದಲು ಉಪವಾಸ ಕೈಗೊಂಡಿದ್ದಾಗ ಅವರಿಗೆ 54 ವರ್ಷ. ಕೊನೆಯ ಉಪವಾಸ ಕೈಗೊಂಡಿದ್ದಾಗ ಅವರಿಗೆ 78 ವರ್ಷ. ಕೋಲ್ಕತ್ತ ಉಪವಾಸದಿಂದಾಗಿ ಆಗಲೇ ಅವರ ಮೂತ್ರಪಿಂಡಗಳು ಹಾನಿಗೀಡಾಗಿದ್ದವು. ಉಪವಾಸದ ಕೊನೆಯ ದಿನಗಳಲ್ಲಿ ಅವರಿಗೆ ಚಾಪೆ ಬಿಟ್ಟು ಏಳಲಾಗುತ್ತಿರಲಿಲ್ಲ. ಮಾತು ನಿಂತು ಹೋಗಿತ್ತು, ವೈದ್ಯರು ಕೈಚೆಲ್ಲಿ ಬಿಟ್ಟಿದ್ದರು. ಉಳಿದದ್ದು ಯಾವುದನ್ನೂ ಲೆಕ್ಕಿಸದೆ ಗಾಂಧೀಜಿ ಸಾಯಲು ಸಿದ್ಧರಾಗಿದ್ದರು. 121 ಘಂಟೆ 30 ನಿಮಿಷಗಳ ಅವಧಿಯ ಉಪವಾಸದ ನಂತರ ಸರ್ಕಾರ ಮತ್ತು ಜನತೆ ಮಣಿಯಿತು. ಅವರು ಸಾವನ್ನು ಗೆದ್ದಿದ್ದರು.

ಆದರೆ ಅದೇ ದಿನ, ಇನ್ನೊಂದು ಕಡೆಯಿಂದ ಸಾವು ಅವರ ಬೆನ್ನಟ್ಟಿಕೊಂಡು ಬರುತ್ತಿತ್ತು. ನಾಥುರಾಮ್ ಗೋಡ್ಸೆ ಮತ್ತು ನಾರಾಯಣ ಅಪ್ಟೆ ಮುಂಬೈನ ವೀರ್ ಸಾವರ್ಕರ್ ಮನೆಯಿಂದ ಬೀಳ್ಕೊಂಡು ಮುಂಬೈ–ದೆಹಲಿ ವಿಮಾನ ಹತ್ತಿದ್ದರು. ಸರಿಯಾಗಿ ಹದಿಮೂರು ದಿನಗಳ ನಂತರ ಗೋಡ್ಸೆ ಪಿಸ್ತೂಲಿನ ಗುಂಡು ಗಾಂಧೀಜಿ ಎದೆ ಸೀಳಿತ್ತು. ಗಾಂಧೀಜಿಯನ್ನು ಬಲಿ ತೆಗೆದುಕೊಂಡ ಒಬ್ಬ ಮತಾಂಧನ ಗುಂಡು, ಸಾವಿಗೆ ನೆಪ ಅಷ್ಟೆ. ದೇಶ ವಿಭಜನೆಯಾದಾಗಲೇ ಅವರು ಅರ್ಧ ಸತ್ತಿದ್ದರು. ಉಳಿದರ್ಧ ಜೀವವನ್ನು ಸ್ವಾತಂತ್ರ್ಯ ನಂತರ ಭುಗಿಲೆದ್ದ ಕೋಮುಗಲಭೆ ಬಲಿ ತೆಗೆದುಕೊಂಡು ಬಿಟ್ಟಿತು. ಅದರ ನಂತರ ನೂರಾರು ಬಾರಿ ಗಾಂಧೀಜಿ ಸತ್ತಿದ್ದಾರೆ. 2002ರ ಫೆಬ್ರವರಿ–ಮಾರ್ಚ್ ತಿಂಗಳಲ್ಲಿ ತನ್ನ ಹುಟ್ಟೂರಾದ ಗುಜರಾತ್‌ನಲ್ಲಿಯೂ ಅವರು ಸತ್ತಿದ್ದರು. ಆ ಹೊತ್ತಿನಲ್ಲಿ ಗಾಂಧೀಜಿ ಅಲ್ಲಿದ್ದರೆ ಏನು ಮಾಡುತ್ತದ್ದರು? ಆಗ ಸುಮ್ಮನಿದ್ದು, ಒಂಬತ್ತು ವರ್ಷಗಳ ನಂತರ ಹವಾ ನಿಯಂತ್ರಿತ ಸಭಾಂಗಣದಲ್ಲಿ ಮೂರು ದಿನಗಳ ಉಪವಾಸ ಮಾಡುತ್ತಿದ್ದರೇ? ಹಾಗಿದ್ದರೆ ಗಾಂಧೀಜಿಯಿಂದ ನಾವು ಕಲಿತದ್ದೇನು?

# ಬ್ಯಾರಿಸ್ಟರ್ ಏನೋ ಆದೆ – ಆದರೆ ಆಮೇಲೆ ?

– ಗೊರೂರು ರಾಮಸ್ವಾಮಿ ಅಯ್ಯಂಗಾರ್

**ನಾನು ಇಂಗ್ಲೆಂಡಿಗೆ ಹೋದ ಉದ್ದೇಶವನ್ನು, ಬ್ಯಾರಿಸ್ಟರ್ ಆಗುವುದನ್ನು, ಕುರಿತು ನಾನು ಇದುವರೆಗೆ ಏನನ್ನೂ ಹೇಳಲಿಲ್ಲ. ಆ ವಿಚಾರವಾಗಿ ಕೆಲವು ಮಾತುಗಳನ್ನು ಸಂಕ್ಷೇಪವಾಗಿ ಹೇಳಲು ಈಗ ಕಾಲವೊದಗಿದೆ.**

ಒಬ್ಬ ವಿದ್ಯಾರ್ಥಿಯು ಬ್ಯಾರಿಸ್ಟರ್ ಆಗಬೇಕಾದರೆ ಎರಡು ಷರತ್ತುಗಳನ್ನು ಪಾಲಿಸಬೇಕಾಗಿತ್ತು: 'ಟರ್ಮುಗಳನ್ನು ಉಳಿಸುವುದು' ಒಬ್ಬ ವಿದ್ಯಾರ್ಥಿ ಹನ್ನೆರಡು ಟರ್ಮುಗಳು, ಎಂದರೆ ಮೂರು ವರ್ಷಗಳನ್ನು, ಕಾಲೇಜಿನಲ್ಲಿ ಕಳೆಯುವುದು, ಮತ್ತು ಪರೀಕ್ಷೆಯಲ್ಲಿ ತೇರ್ಗಡೆಯಾಗುವುದು. ಟರ್ಮುಗಳನ್ನು ಉಳಿಸುವುದು ಎಂದರೆ ಟರ್ಮುಗಳ ಅವಧಿಯಲ್ಲಿ ತಿನ್ನುವುದು ಎಂದು ಅರ್ಥ. ಏಕೆಂದರೆ ಒಂದು ಟರ್ಮಿನ ಇಪ್ಪತ್ತನಾಲ್ಕು ಭೋಜನ ಕೂಟಗಳ ಪೈಕಿ, ವಿದ್ಯಾರ್ಥಿ ಆರು ಕೂಟಗಳಲ್ಲಿ–ಯಾದರೂ ಹೋಗಿ ಊಟ ಮಾಡಬೇಕಾಗಿತ್ತು. ತಿನ್ನುವುದು ಎಂದರೆ ತಿನ್ನಲೇಬೇಕೆಂದು ಅರ್ಥವಲ್ಲ. ಆದರೆ ಊಟಕ್ಕೆ ಬಂದಿದ್ದೇನೆ ಎಂಬುದನ್ನು ಸಕಾಲದಲ್ಲಿ ಪ್ರಕಟಿಸಿ ಊಟ ಮುಗಿಯುವವರೆಗೆ ಅಲ್ಲಿಯೇ ಇರಬೇಕಾಗಿತ್ತು. ದೊರೆಯುತ್ತಿದ್ದ ಒಳ್ಳೆಯ ಭೋಜನ ಮತ್ತು ಉತ್ತಮವಾದ ಮದ್ಯವನ್ನು ಎಲ್ಲರೂ ಸಾಧಾರಣವಾಗಿ ತಿನ್ನುತ್ತಿದ್ದರು ಮತ್ತು ಕುಡಿಯುತ್ತಿದ್ದರು. ಒಂದು ಊಟಕ್ಕೆ ಎರಡೂವರೆ ಷಿಲಿಂಗ್‌ನಿಂದ ಮೂರೂವರೆ ಷಿಲಿಂಗ್‌ವರೆಗೆ ಖರ್ಚು ಬೀಳುತ್ತಿತ್ತು. ಅಂದರೆ ಎರಡರಿಂದ ಮೂರು ರೂಪಾಯಿ. ಈ ಬೆಲೆ ಅಷ್ಟೇನೂ ಹೆಚ್ಚಲ್ಲವೆಂದು ಜನ ಭಾವಿಸಿದ್ದರು. ಏಕೆಂದರೆ ಒಂದು ಭೋಜನ ಗೃಹಕ್ಕೆ ಹೋದರೆ ಬರಿಯ ಮದ್ಯಕ್ಕೆ ಮಾತ್ರವೇ ಅಷ್ಟು ಹಣವನ್ನು ಕೊಡಬೇಕಾಗುತ್ತಿತ್ತು. ಭಾರತದಲ್ಲಿರುವ ನಮಗೆ ನಾವು "ನಾಗರಿಕ"ರಾಗದಿದ್ದಲ್ಲಿ ಆಹಾರಕ್ಕಿಂತ ಕುಡಿತಕ್ಕೆ ಬೆಲೆ ಹೆಚ್ಚಾದರೆ ಆಶ್ಚರ್ಯವಾಗುತ್ತದೆ. ಈ ವಿಷಯ ನನಗೆ ಮೊದಲು ತಿಳಿದಾಗ ನಾನು ಬೆಚ್ಚಿಬಿದ್ದೆ. ಹೀಗೆ ಹಣವನ್ನು ಕುಡಿತಕ್ಕಾಗಿ ಪೋಲುಮಾಡಲು ಜನರಿಗೆ ಹೇಗೆ ಮನಸ್ಸು ಬರುತ್ತದೆ ಎಂದು ನನಗೆ ಆಶ್ಚರ್ಯವಾಯಿತು. ಆನಂತರ ನನಗೆ ವಿಷಯಗಳು ತಿಳಿದವು. ಈ ಭೋಜನಕೂಟಗಳಲ್ಲಿ ನಾನು ಸಾಧಾರಣವಾಗಿ ಏನನ್ನೂ ತಿನ್ನುತ್ತಲೇ ಇರಲಿಲ್ಲ. ಏಕೆಂದರೆ ಅಲ್ಲಿ ನಾನು ತಿನ್ನಬಹುದಾಗಿದ್ದುದು ರೊಟ್ಟಿ, ಬೇಯಿಸಿದ ಆಲೂಗಡ್ಡೆ, ಕೋಸುಗಡ್ಡೆ. ಅವು ಮೊದಮೊದಲು ನನಗೆ ರುಚಿಸಲಿಲ್ಲವಾಗಿ ನಾನು ಅವನ್ನು ತಿನ್ನುತ್ತಿರಲಿಲ್ಲ. ಆದರೆ ನಾನು ಅವುಗಳ ರುಚಿಯನ್ನು ತಿಳಿದು ತಿನ್ನಲು ಪ್ರಾರಂಭಿಸಿದ ಮೇಲೆ ಇತರ ಪದಾರ್ಥಗಳನ್ನು ಕೇಳಿ ತರಿಸಲು ನನಗೆ ಧೈರ್ಯವುಂಟಾಯಿತು.

ವಿದ್ಯಾರ್ಥಿಗಳ ಊಟಕ್ಕಿಂತ ಬೆಂಚರ್‌ಗಳ (ವಿದ್ಯಾಮಂದಿರದ ಮಂಡಳಿಯ ಸದಸ್ಯರು) ಊಟ ಹೆಚ್ಚು ಉತ್ತಮವಾಗಿರುತ್ತಿತ್ತು. ಶಾಖಾಹಾರಿ–ಯಾಗಿದ್ದ ಒಬ್ಬ ಪಾರಸೀ ವಿದ್ಯಾರ್ಥಿಯೂ ನಾನೂ, ಶಾಖಾಹಾರಿ ತತ್ತ್ವದ ಹಿತದೃಷ್ಟಿಯಿಂದ "ಬೆಂಚರು"ಗಳ ಜತೆ ನಮಗೂ ಶಾಕಾಹಾರಿ ತಿಂಡಿಗಳನ್ನು ಒದಗಿಸಬೇಕೆಂದು ಕೋರಿದೆವು. ನಮ್ಮ ಪ್ರಾರ್ಥನೆಗೆ ಮನ್ನಣೆ ದೊರೆಯಿತು. ನಾವು ಬೆಂಚರ್‌ಗಳ ಅಡುಗೆ ಮನೆಯಿಂದ



ಹಣ್ಣುಗಳನ್ನೂ ಇತರ ತರಕಾರಿಗಳನ್ನೂ ತರಿಸಿ ತಿನ್ನತೊಡಗಿದೆವು.

ನಾಲ್ಕು ಜನರ ಒಂದು ಗುಂಪಿಗೆ ಎರಡು ಸೀಸೆ ದ್ರಾಕ್ಷಾರಸವನ್ನು ಕೊಡುತ್ತಿದ್ದರು. ನಾನು ಅದನ್ನು ಮುಟ್ಟುತ್ತಿರಲಿಲ್ಲ. ನಾಲ್ವರ ಗುಂಪಿನ ಒಬ್ಬ ಸದಸ್ಯನಾಗಬೇಕೆಂದು ನನಗೆ ಯಾವಾಗಲೂ ಒತ್ತಾಯವಿರುತ್ತಿತ್ತು. ಏಕೆಂದರೆ ಆಗ ಆ ಮೂರು ಮಂದಿ, ಎರಡು ಸೀಸೆ ದ್ರಾಕ್ಷಾರಸನ್ನೂ ಕುಡಿಯಲು ಅವಕಾಶವಾಗುತ್ತಿತ್ತು. ಪ್ರತಿ ಟರ್ಮಿ–ನಲ್ಲಿಯೂ ಒಂದು "ವಿಶೇಷ ರಾತ್ರಿ" ಬೇರೆ ಇರುತ್ತಿತ್ತು. ಆ ದಿವಸ ಪೋರ್ಟ್, ಷೆರ್ರಿ ಮುಂತಾದ, ಸಾಮಾನ್ಯ ಮದ್ಯಗಳನ್ನಲ್ಲದೆ ಷಾಮ್‌ಪೇನನ್ನೂ ಸಹ ಕೊಡುತ್ತಿದ್ದರು. ಆದುದರಿಂದ ಮಿತ್ರರು ನಾನು ಹೋಗಲೇಬೇಕೆಂದು ಪ್ರಾರ್ಥಿಸುತ್ತಿದ್ದರು. ವಿಶೇಷ ರಾತ್ರಿಯಂದು ನಾನು ಎಲ್ಲರಿಗೂ ಬೇಕಾದವನಾಗಿರುತ್ತಿದ್ದೆ.

ಈ ಊಟಗಳಿಂದ ವಿದ್ಯಾರ್ಥಿಗಳಿಗೆ ಬ್ಯಾರಿಸ್ಟರ್ ಆಗಲು ಹೇಗೆ ಹೆಚ್ಚು ಯೋಗ್ಯತೆಯುಂಟಾಯಿತು ಎಂಬುದು ಆಗ ನನಗೆ ಅರ್ಥವಾಗಿರಲಿಲ್ಲ, ಈಗಲೂ ಆಗಿಲ್ಲ. ಒಂದು ಕಾಲದಲ್ಲಿ, ಕಡಿಮೆ ಸಂಖ್ಯೆ

ವಿದ್ಯಾರ್ಥಿಗಳು ಇಂತಹ ಊಟಗಳಿಗೆ ಬರುತ್ತಿದ್ದರು. ಈ ಸಂದರ್ಭಗಳಲ್ಲಿ ಅವರಿಗೂ "ಬೆಂಚರ್"ಗಳಿಗೂ ಮಾತುಕತೆಯಾಡಲು, ಒಂದೊಂದು ವೇಳೆ ಭಾಷಣಗಳನ್ನೂ ಸಹ ಮಾಡಲು ಅವಕಾಶವುಂಟಾಗುತ್ತಿತ್ತು. ಆದರೆ ನಾನು ಅಲ್ಲಿದ್ದ ಕಾಲದಲ್ಲಿ ಅದಾವುದೂ ಸಾಧ್ಯವಿರಲಿಲ್ಲ. "ಬೆಂಚರ್"ಗಳಿಗಾಗಿಯೇ ಬೇರೆ ಭೋಜನದ ಮೇಜನ್ನು ಒದಗಿಸಿದ್ದರು. ಆ ಪದ್ಧತಿಯಲ್ಲಿ ಮೊದಲು ಇದ್ದ ಅರ್ಥ ಇಲ್ಲವಾಗಿತ್ತು. ಆದರೆ ಸಂಪ್ರದಾಯಬದ್ಧವಾದ ಇಂಗ್ಲೆಂಡ್ ಇನ್ನೂ ಈ ಪದ್ಧತಿಯನ್ನು ಉಳಿಸಿಕೊಂಡಿತ್ತು.

ಬ್ಯಾರಿಸ್ಟರ್ ಪರೀಕ್ಷೆಯ ಪಾಠಕ್ರಮ ಸುಲಭವಾಗಿತ್ತು. ಬ್ಯಾರಿಸ್ಟರ್‌ಗಳನ್ನು ವಿನೋದವಾಗಿ "ಊಟದ ಬ್ಯಾರಿಸ್ಟರ್"ಗಳು ಎಂದೇ ಕರೆಯುತ್ತಿದ್ದರು. ಆ ಪರೀಕ್ಷೆಗಳಿಗೆ ಬೆಲೆ ಇಲ್ಲವೆಂದು ಎಲ್ಲರಿಗೂ ಗೊತ್ತಿತ್ತು. ನಾನು ಹೋದ ಕಾಲದಲ್ಲಿ ಎರಡು ಪರೀಕ್ಷೆಗಳಿದ್ದವು. ಒಂದು ರೋಮನ್ ಕಾನೂನಿನಲ್ಲಿ, ಮತ್ತೊಂದು ಸಾಮಾನ್ಯ ಕಾನೂನಿನಲ್ಲಿ. ಈ ಪರೀಕ್ಷೆಗಳಿಗೆ ಗೊತ್ತಾದ ಪಠ್ಯಪುಸ್ತಕಗಳಿದ್ದವು. ಪರೀಕ್ಷೆಗಳಿಗೆ ಭಾಗಶಃ ಕುಳಿತುಕೊಳ್ಳಲು ಅವಕಾಶವಿತ್ತು. ಆದರೆ ಪಠ್ಯಪುಸ್ತಕಗಳನ್ನು ಯಾರೂ ಓದುತ್ತಿರಲಿಲ್ಲ. ರೋಮನ್ ಕಾನೂನನ್ನು ಕುರಿತ ಪಠ್ಯಪುಸ್ತಕವನ್ನೇ ಓದದೆ ಎರಡು ಮೂರು ವಾರಗಳಲ್ಲಿ ಟಿಪ್ಪಣಿ (ನೋಟ್ಸ್) ಓದಿ ತೇರ್ಗಡೆಯಾದ ಅನೇಕರು ನನಗೆ ಗೊತ್ತು. ಹಾಗೆಯೇ ಎರಡು ಮೂರು ತಿಂಗಳಲ್ಲಿ ಕಾಮನ್‌ಲಾನೋಟ್ಸ್ ಓದಿ ತೇರ್ಗಡೆಯಾದನೂ ನನಗೆ ಗೊತ್ತು. ಪ್ರಶ್ನೆಪತ್ರಿಕೆಗಳು ಸುಲಭವಾಗಿ ಇರುತ್ತಿದ್ದವು. ಪರೀಕ್ಷಕರು ಉದಾರಿಗಳಾಗಿದ್ದರು. ರೋಮನ್ ಕಾನೂನಿನಲ್ಲಿ ತೇರ್ಗಡೆ ಹೊಂದುತ್ತಿದ್ದವರ ಸಂಖ್ಯೆ ಶೇಕಡಾ 95ರಿಂದ 99ರವರೆಗೆ ಇರುತ್ತಿತ್ತು. ಕಡೆಯ ಪರೀಕ್ಷೆಯಲ್ಲಿ ಶೇಕಡಾ 75ಕ್ಕಿಂತ ಹೆಚ್ಚು ಮಂದಿ ತೇರ್ಗಡೆಯಾಗುತ್ತಿದ್ದರು. ಹೀಗೆ ಪರೀಕ್ಷೆಯಲ್ಲಿ ಅನುತ್ತೀರ್ಣರಾಗುವ ಭಯವೇ ಇರಲಿಲ್ಲ. ವರ್ಷಕ್ಕೆ ನಾಲ್ಕು ಸಲ ಪರೀಕ್ಷೆಗಳು ನಡೆಯುತ್ತಿದ್ದವು. ಅವು ಕಷ್ಟವಾಗಿ ತೋರುತ್ತಲೇ ಇರಲಿಲ್ಲ. ಆದರೆ ಅದನ್ನೇ ಕಷ್ಟವಾಗಿ ಮಾಡಿಕೊಳ್ಳುವುದರಲ್ಲಿ ನಾನು ಸಫಲನಾದೆ. ಎಲ್ಲ ಪಠ್ಯಪುಸ್ತಕಗಳನ್ನೂ ಓದಬೇಕೆಂದು ನಾನು ಯೋಚಿಸಿದೆ. ಪಠ್ಯಪುಸ್ತಕಗಳನ್ನು ಓದಿರುವುದು ಒಂದು ಮೋಸ ಎಂದು ನಾನು ಭಾವಿಸಿದೆ. ಅವುಗಳನ್ನು ಕೊಳ್ಳಲು ನಾನು ಹೆಚ್ಚು ಹಣ ವೆಚ್ಚ ಮಾಡಿದೆ. ರೋಮನ್ ಕಾನೂನನ್ನು ನಾನು ಲ್ಯಾಟಿನ್ ಭಾಷೆಯಲ್ಲಿಯೇ ಓದಬೇಕೆಂದು ನಿಶ್ಚಯಿಸಿದೆ.

ನಾನು ಲಂಡನ್ ಮೆಟ್ರಿಕ್ಯುಲೇಷನ್ ಪರೀಕ್ಷೆಗಾಗಿ ಕಲಿತಿದ್ದ ಲ್ಯಾಟಿನ್ ಈಗ ನನ್ನ ಉಪಯೋಗಕ್ಕೆ ಒದಗಿತು. ನಾನು ಹಾಗೆ ಓದಿದುದೆಲ್ಲ ನನ್ನ ಮುಂದಿನ ಬಾಳಿನಲ್ಲಿ ದಕ್ಷಿಣ ಆಫ್ರಿಕಾದಲ್ಲಿ ಏನೂ ಬೆಲೆಯೇ ಇಲ್ಲದುದಾಗಲಿಲ್ಲ. ದಕ್ಷಿಣ ಆಫ್ರಿಕಾದಲ್ಲಿ ರೋಮನ್, ಡಚ್ ಕಾನೂನು ಎಂಬುದೇ ಪ್ರಚಾರದಲ್ಲಿರುವ ಕಾನೂನು. ಆದುದರಿಂದ ನಾನು ಜಸ್ಟೀನಿಯನ್ (ರೋಮನ್ ಕಾನೂನು ಬರೆದವನು) ಬರೆದ ಗ್ರಂಥವನ್ನು ವ್ಯಾಸಂಗ ಮಾಡಿದುದು ದಕ್ಷಿಣ ಆಫ್ರಿಕಾದ ಕಾನೂನನ್ನು ತಿಳಿದುಕೊಳ್ಳು-ವುದರಲ್ಲಿ ಬಹಳ ಸಹಕಾರಿಯಾಯಿತು.

ಇಂಗ್ಲೆಂಡಿನ ಸಾಮಾನ್ಯ ಕಾನೂನನ್ನು ಓದಲು ಒಂಭತ್ತು ತಿಂಗಳ ಕಠಿಣ ಅಭ್ಯಾಸ ಮಾಡಬೇಕಾಯಿತು. ಏಕೆಂದರೆ, ಬ್ರೂಮ್ ಬರೆದ ಕಾಮನ್ ಲಾ (ದೊಡ್ಡದಾಗಿದ್ದರೂ ಆಕರ್ಷಣೀಯವಾದ ಪುಸ್ತಕ)ವನ್ನು ವ್ಯಾಸಂಗ ಮಾಡಲು ನನಗೆ ಹೆಚ್ಚು ಕಾಲವೇ ಬೇಕಾಯಿತು. ಸ್ನೆಲ್ ಎಂಬುವರು ಬರೆದಿರುವ ಈಕ್ವಿಟಿ ಎಂಬ ಗ್ರಂಥ ಮನೋರಂಜಕವಾಗಿದ್ದರೂ ತಿಳಿದುಕೊಳ್ಳಲು ಕಷ್ಟವಾಗಿತ್ತು. ವೈಟ್ ಮತ್ತು ಟ್ಯೂಡರ್ ಎಂಬುವರು ಬರೆದ 'ಕೆಲವು ಮುಖ್ಯ ಮೊಕದ್ದಮೆಗಳು' ಎಂಬ ಪುಸ್ತಕ



(ಇದರಲ್ಲಿ ಕೆಲವು ಮೊಕದ್ದಮೆಗಳನ್ನು ಪರೀಕ್ಷೆಗೆ ಇಟ್ಟಿದ್ದರು). ಸೊಗಸಾಗಿಯೂ ಬೋಧಪ್ರದವಾಗಿಯೂ ಇದ್ದಿತು. ನಾನು ವಿಲಿಯಮ್ಸ್ ಮತ್ತು ಎಡ್ವರ್ಡ್‌ರು ಸ್ಥಿರ ಸ್ವತ್ತಿನ ಮೇಲೆ ಬರೆದ ಪುಸ್ತಕವನ್ನೂ ಗೂಡೀವ್ಸ್‌ರವರು ಚರಸ್ವತ್ತಿನ ಮೇಲೆ ಬರೆದ ಪುಸ್ತಕವನ್ನೂ ಉತ್ಸಾಹದಿಂದ ಓದಿದೆ. ವಿಲಿಯಮ್ಸ್‌ರ ಪುಸ್ತಕ, ಕಾದಂಬರಿಯಂತೆ ರಂಜಕವಾಗಿತ್ತು. ಭಾರತಕ್ಕೆ ಹಿಂದಿರುಗಿದ ಮೇಲೆ ಅಷ್ಟೇ ಉತ್ಸಾಹದಿಂದ ನಾನು ಓದಿದ ಪುಸ್ತಕ ಎಂದರೆ ಮೇನ್ ಬರೆದ 'ಹಿಂದೂ ಕಾನೂನು'. ಆದರೆ ಭಾರತದ ಕಾನೂನು ಗ್ರಂಥಗಳನ್ನು ಕುರಿತು ಹೇಳಲು ಇದು ಸ್ಥಳವಲ್ಲ.

1891ನೇ ಇಸವಿ ಜೂನ್ 10ನೆಯ ತಾರೀಖಿನಂದು ನಾನು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದೆ. ಬ್ಯಾರಿಸ್ಟರ್ ಆದೆ. ಹನ್ನೊಂದನೆಯ ತಾರೀಖು ಇಂಗ್ಲೆಂಡಿನ ಹೈಕೋರ್ಟಿನಲ್ಲಿ ವಕೀಲನಾಗಿ ದಾಖಲೆ ಹೊಂದಿ, ಹನ್ನೆರಡನೆಯ ತಾರೀಖಿಗೆ ಭಾರತಕ್ಕೆ ಹಡಗಿನಲ್ಲಿ ಪ್ರಯಾಣ ಹೊರಟೆ. ಆದರೆ ನಾನು ಅಷ್ಟು ವ್ಯಾಸಂಗ ಮಾಡಿದ್ದರೂ ನನ್ನ ನಿಸ್ಸಹಾಯಕತೆಗೂ ಭಯಕ್ಕೂ ಕೊನೆ ಇರಲಿಲ್ಲ. ವಕೀಲಿ ಉದ್ಯೋಗವನ್ನು ನಡೆಸುವ ಯೋಗ್ಯತೆ ನನಗೆ ಇದೆಯೆಂದು ಧೈರ್ಯ-ವುಂಟಾಗಲಿಲ್ಲ. ನನ್ನ ಈ ನಿಸ್ಸಹಾಯಕತೆ-ಯನ್ನು ವಿವರಿಸಲು ಬೇರೆ ಅಧ್ಯಾಯವೇ ಅವಶ್ಯಕ.



# ಮಹಾತ್ಮರ ಹೆಜ್ಜೆ ಗುರುತು

– ವೇಮಗಲ್ ಸೋಮಶೇಖರ್

**ಗಾಂಧೀಜಿ ಸಮಯದ ಕುರಿತು ಬಹಳ ಕಾಳಜಿ ವಹಿಸುತ್ತಿದ್ದರು. ಈ ಸಮಯ ಪಾಲನೆ, ಸಮಯಪ್ರಜ್ಞೆ ದೇಶಭಕ್ತಿಯ ಲಕ್ಷಣ ಎಂಬುದು ಮಹಾತ್ಮರ ಅನುಭವದ ಮಾತಾಗಿದೆ**

ಸಮಯದ ಮಹತ್ವ, ಪಾವಿತ್ರತೆ ಹಾಗೂ ಅದರ ಬೆಲೆಯನ್ನು ಕಾಪಾಡುವುದು, ಒಮ್ಮೆ ನಿಶ್ಚಿಯಿಸಿದ ವೇಳೆಯನ್ನು ಕೈ ಬಿಡದಿರುವುದು, ಗಡಿಯಾರದಂತೆ ಕೆಲಸ ಆರಂಭಿಸಿ ಮುಗಿಸುವುದು ಇವೆಲ್ಲಾ ಮಹಾತ್ಮಾ ಗಾಂಧೀಯವರಿಗೆ ರೂಢಿಯಾಗಿ ಹೋಗಿತ್ತು. ಕಾಲ ಮೀರಿದರೆ ಸಮಯ ಹಾಳಾಗುತ್ತದೆ, ಜನರಲ್ಲಿ ಶಿಥಿಲತೆ ಬರುತ್ತದೆ, ಕೆಲಸವೂ ಕೆಡುತ್ತದೆ ಎಂದು ಕಾಲದ ಬಗ್ಗೆ ಬಹಳ ಕಾಳಜಿ ವಹಿಸುತ್ತಿದ್ದ ಗಾಂಧೀಜಿ ಯಾರಿಗೂ ದಯೆ ತೋರಿಸದೆ ತಮ್ಮ ಭೇಟಿಗೆ ಬರುವವರು ಐದು ನಿಮಿಷ ತಡ ಮಾಡಿದರೆ ಸಂದರ್ಶನಾವಕಾಶವನ್ನೇ ಕೊಡುತ್ತಿರಲಿಲ್ಲ. ಕಾರ್ಯಕ್ರಮಗಳಿಗೆ ಕರೆದುಕೊಂಡು ಹೋಗಲು ಬರುವವರು ವೇಳೆಗೆ ಸರಿಯಾಗಿ ಬಾರದೆ ಇದ್ದಲ್ಲಿ ಅವರಿಗಾಗಿ ಕಾಯದೆ ತಾವೊಬ್ಬರೇ ನಡೆದುಕೊಂಡು ಹೊರಟು ಬಿಡುತ್ತಿದ್ದರು.

ಗುಜರಾತಿನ ಗೋಧಾರ ನಗರದಲ್ಲಿ 1917 ನವೆಂಬರ್ ಎರಡರಿಂದ ಐದರವರೆಗೆ ಅಲ್ಲಿನ ರಾಜಕೀಯ ಪರಿಷತ್ತಿನ ಸಮ್ಮೇಳನ ನಡೆಯುತ್ತಿದ್ದ ಸಂದರ್ಭದಲ್ಲಿ ಲೋಕಮಾನ್ಯ ಬಾಲಗಂಗಾಧರ ತಿಲಕರು ಬರಲು ಸ್ವಲ್ಪ ತಡವಾಯಿತು. ಗಾಂಧೀಜಿ ಅವರಿಗೆ ಆದರ ಪೂರ್ವಕ ಸ್ವಾಗತ ನೀಡಿದರು. ಆಗ ಮಾತನಾಡುತ್ತಾ ಗಾಂಧೀಜಿ "ಲೋಕಮಾನ್ಯರು ಅರ್ಧ ಗಂಟೆ ತಡವಾಗಿ ಬಂದಿದ್ದಾರೆ, ಸ್ವರಾಜ್ಯ ಸಿಗಲಿಕ್ಕೆ ಅರ್ಧಗಂಟೆ ತಡವಾದರೆ ಅದಕ್ಕೆ ಲೋಕಮಾನ್ಯರೆ ಜವಾಬ್ದಾರರು" ಎಂಬುದಾಗಿ ಪ್ರೇಮದಿಂದ ವಿನೋದವಾಗಿ ತಮ್ಮ ಭಾಷಣದಲ್ಲಿ ತಿಳಿಸಿದರು.

ಒಂದು ಸಲ ಗಾಂಧೀಜಿ ಕಾಕಾ ಕಾಲೇಲ್ಕರರಿಗೆ ಪಕ್ಕದ ಊರಲ್ಲಿ ನಡೆಯುವ ಸಭೆಗೆ ಹೋಗಲು ಹೇಳಿದ್ದರು. ಅವರನ್ನು ಕರೆದೊಯ್ಯಲಿಕ್ಕೆ ಕೆಲ ಜನರು ಬರಲಿದ್ದರು. ಆದರೆ ಒಂದು ಗಂಟೆ ಕಳೆದರೂ ಯಾರೂ ಬರಲೇ ಇಲ್ಲ! ಇದನ್ನು ಕಂಡ ಗಾಂಧೀಜಿ 'ಇನ್ನೂ ಯಾಕೆ ಯಾರು ಬರಲೇ ಇಲ್ಲ? ಎಂದು ಕೇಳಿದರು. 'ನಾನೇನೋ ತಯಾರಾಗಿ ಕುಳಿತಿದ್ದೇನೆ, ಕರೆಯೊಯ್ಯಲಿಕ್ಕೆ ಯಾರೂ ಬರಲೇ ಇಲ್ಲ' ಎಂದು ಕಾಲೇಲ್ಕರರು ಉತ್ತರ ಕೊಟ್ಟರು. ಇದನ್ನು ಕೇಳಿದ ಗಾಂಧೀಜಿ ಸಿಟ್ಟಿನಿಂದ 'ಹೀಗೆ ಆಗಕೂಡದು, ವೇಳೆಗೆ ಸರಿಯಾಗಿ ನಾವು ಹೊರಡಲೇ ಬೇಕಿತ್ತು. ಕಾರು ಬರದಿದ್ದರೂ ಚಿಂತೆ ಮಾಡುತ್ತಾ ಕುಳಿತುಕೊಳ್ಳದೆ ಕಾಲ್ನಡಿಗೆಯಲ್ಲಿಯೇ ಹೋಗೋಣ' ಎಂದರು. ಈ ಉತ್ತರ ಕೇಳಿ ನಾಚಿದ ಕಾಲೇಲ್ಕರರು, ಮಹಾತ್ಮರೊಡನೆ ನಡೆದುಕೊಂಡೆ ಹೋದರು.

ಒಮ್ಮೆ ಗಾಂಧೀಜಿ ಮುಂಬಯಿನಿಂದ ದೆಹಲಿಗೆ ಹೊರಡುವುದರಲ್ಲಿದ್ದರು, ಸರಿಯಾಗಿ ನಾಲ್ಕು ಗಂಟೆಗೆ ಅವರನ್ನು ಮುಂಬಯಿ ರೈಲ್ವೆ ಸ್ಟೇಷನ್‌ಗೆ ಕರೆದೊಯ್ಯಲು ಕಾರನ್ನು ಕಳಿಸುತ್ತೇನೆಂದು ವ್ಯಾಪಾರಿಯೊಬ್ಬರು ಹೇಳಿದ್ದರು. ಆದರೆ ನಿಗದಿತ ಸಮಯಕ್ಕೆ ಕಾರು ಬರಲೇ ಇಲ್ಲ. ತಕ್ಷಣ "ಕಾರಿಗೆ ನಾನು ಕಾಯಲಾರೆ" ಎನ್ನುತ್ತಾ ಗಾಂಧೀಜಿ ನಡೆಯುತ್ತಾ



ಹೊರಟೇಬಿಟ್ಟರು. ಸ್ವಲ್ಪ ಮುಂದೆ ಹೋಗುತ್ತಲೇ ವ್ಯಾಪಾರಿಯ ಕಾರ್ ಬಂದೇಬಿಟ್ಟಿತು. ತನ್ನ ತಪ್ಪಿನಿಂದಾಗಿ ಮಹಾತ್ಮರು ನಡೆದು ಹೋಗುತ್ತಿರುವುದನ್ನು ಕಂಡು ಕಾರು ಚಾಲಕನಿಗೆ ತುಂಬಾ ದುಃಖವಾಯಿತು. ಚಾಲಕ ಗಾಂಧೀಯವರ ಬಳಿ ಬಂದು "ಈಗ ಮೋಟಾರಿನಲ್ಲಿ ಕುಳಿತುಕೊಳ್ಳಿರಿ' ಎಂದು ವಿನಂತಿಸಿಕೊಂಡ. ಇಲ್ಲ, ಇಲ್ಲ, ನಾನು ನಡೆದೇ ಸ್ಟೇಶನ್ ಮುಟ್ಟುವೆ. ಈಗ ನಾನು ನಿನ್ನ ಮೋಟಾರಿನಲ್ಲಿ ಕುಳಿತರೆ ನೀನೆಂದೂ ಸಮಯಪ್ರಜ್ಞೆಯ ಪಾಠ ಕಲಿಯಲಾರೆ. ಇಂದಿನ ಪ್ರಸಂಗದಿಂದಲಾದರೂ ನೀನು ವೇಳೆಯ ಬೆಲೆಯನ್ನು ಕಲಿತುಕೋ" ಎನ್ನುತ್ತಾ ನಡೆದೇ ಗಾಂಧೀಜಿ ವೇಳೆಗೆ ಸರಿಯಾಗಿ ರೈಲ್ವೇ ಸ್ಟೇಶನ್ ತಲುಪಿದರು. ಸ್ಟೇಶನ್‌ನಲ್ಲಿದ್ದ ಜನರೆಲ್ಲ ಗಾಂಧೀಜಿ ನಡೆದು ಬಂದುದನ್ನು ಕಂಡು ಚಕಿತರಾದರು. ಅವರಿಗೆ ನಡೆದು ಬಂದ ಸಂಗತಿಯನ್ನು ತಿಳಿಸಿದರು. ಈ ಕಾರಣದಿಂದ ವ್ಯಾಪಾರಿಯು ಚಾಲಕನಿಗೆ ದಂಡಿಸಬಹುದೆಂದು ತಿಳಿದ ಗಾಂಧೀಜಿ, "ಆತನಿಗೆ ಏನೂ ಶಿಕ್ಷೆ ಕೊಡಬೇಡಿರಿ" ಎಂದು ತಿಳಿಸಿದರು. ಸಮಯದ ಪ್ರಜ್ಞೆ ಅರಿಯದ ಚಾಲಕನಿಗೆ ಸಮಯದ

ಮಹತ್ವವನ್ನು ಕಲಿಸುವುದೇ ಗಾಂಧಿಯವರ ಗುರಿಯಾಗಿತ್ತು. ಗಾಂಧೀಯವರ ಈ ತರಹದ ಆಗ್ರಹವು ಒಳ್ಳೆ ಪರಿಣಾಮವನ್ನೇ ಬೀರುತ್ತಿತ್ತು.

ಮುಂಬಯಿಯಲ್ಲಿ 1919ರ ಮಾರ್ಚ್ 15 ರಂದು ಹಿಂದಿ ಸಾಹಿತ್ಯ ಸಮ್ಮೇಳನದ ಅಧೀವೇಶನವು ಗಾಂಧಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಮ್ಮೇಳನದಲ್ಲಿ ಶ್ರೀರಾಮನರೇಶ ತ್ರಿಪಾಠಿಯವರು ಭಾಷಣ ಮಾಡುವವರಿದ್ದರು. ಅವರ ಹೆಸರು ಬರುತ್ತಲೇ "ಭಾಷಣ ಮಾಡಲು ಎಷ್ಟು ವೇಳೆ ಬೇಕು? ಎಂದು ಕೇಳಿದರು. "ಒಂದು ಗಂಟೆ" ಎಂದು ಉತ್ತರ ಕೊಟ್ಟರು. "ಇಲ್ಲ 45 ನಿಮಿಷ ಮಾತ್ರ ಕೊಡುತ್ತೇನೆ, ಇದು ನಿಮ್ಮ ಪರೀಕ್ಷೆ" ಎಂದರು ಗಾಂಧೀಜಿ. ಕೈ ಗಡಿಯಾರ ನೋಡಿಕೊಂಡೇ ಭಾಷಣವನ್ನು ಆರಂಭಿಸಿ ಕ್ಲುಪ್ತ ಸಮಯದಲ್ಲಿ ಮುಗಿಸಿದ ಶ್ರೀರಾಮನರೇಶ ತ್ರಿಪಾಠಿಯವರು 'ನಾನು 43 ನಿಮಿಷಗಳಲ್ಲಿ ನನ್ನ ಭಾಷಣವನ್ನು ಮುಗಿಸಿದ್ದೇನೆ, ಉಳಿದ ಎರಡು ನಿಮಿಷಗಳನ್ನು ಗಾಂಧಿಯವರಿಗೆ ದಾನ ಮಾಡುತ್ತಿದ್ದೇನೆ" ಎಂದು ಹೇಳಿ ಕುಳಿತುಕೊಂಡರು.

ಎರಡು ನಿಮಿಷಗಳ ದಾನ ಎಂಬ ಶಬ್ದ ಕೇಳುತ್ತಲೇ ಇಡೀ ಸಭೆಯು ಕಿವಿ ಗಡಚಿಕ್ಕುವಂತೆ ಚಪ್ಪಾಳೆ ಬಾರಿಸಿತು. ಇದರಿಂದ ಗಾಂಧೀಯವರಿಗೆ ತುಂಬ ಆನಂದವಾಯಿತು. ಅವರು ಎದ್ದು ನಿಂತು "ಭಾರತದಲ್ಲಿ ಯಾರೂ ಈವರೆಗೆ ನನಗೆ ಸಮಯ ದಾನ ಮಾಡಿದ್ದೇ ಇಲ್ಲ. ನಾನು ಗಂಟೆ ಬಾರಿಸಿದರೂ ಭಾಷಣಕಾರರು ಗಮನಿಸದೆ ಹತ್ತೆಂಟು ನಿಮಿಷ ತೆಗೆದುಕೊಂಡೇ ಬಿಡುತ್ತಾರೆ. ಆದ್ದರಿಂದ ಇಂದು ನನಗೆ ದೊರಕಿದ ಎರಡು ನಿಮಿಷ ದಾನವು ಲಕ್ಷಾಂತರ ರೂಪಾಯಿಗಳಿಂಗಿತ ಹೆಚ್ಚಿನದೆಂದು ತಿಳಿಯುತ್ತೇನೆ" ಎಂದು ಹೇಳಿದರು.

ಸಮಯವು ದೇಶದ ಒಂದು ಸಂಪತ್ತು. ಅದರಲ್ಲೂ ಮಿತವ್ಯಯ ಮಾಡಬೇಕಾದದ್ದು ಅವಶ್ಯವಿದೆ. ಅಂದರೆ ಸಮಯವನ್ನು ಪೋಲು ಮಾಡದೆ ಕೂಡಿಡಬೇಕು ಎಂದು ಅರ್ಥ. ಅದು ಒಂದು ರೀತಿ ಬ್ಯಾಂಕ್‌ನಲ್ಲಿ ಹಣ ಕೂಡಿಟ್ಟಂತೆ. ವೇಳೆಗೆ ಅಷ್ಟೊಂದು ಮಹತ್ವವಿದೆ. ಹಣದಂತೆ ಕೂಡಿಟ್ಟ ಸಮಯವೂ ಸಹ ನಮಗೆ ಕಷ್ಟಕ್ಕೆ ಸದುಪಯೋಗವಾಗುತ್ತದೆ. ಈ ಸಮಯ ಪಾಲನೆ, ಸಮಯಪ್ರಜ್ಞೆ ದೇಶಭಕ್ತಿಯ ಲಕ್ಷಣ ಎಂಬುದು ಬಲ್ಲವರ ಅನುಭವದ ಮಾತಾಗಿದೆ.

## ಸರ್ವಗುಣ ಸಂಪನ್ನ ಗ್ರೀನ್ ಟೀ

ಒಂದು ದಿನ ನೀವು ಸೇವಿಸುವ ಟೀ ಕಪ್‌ನಲ್ಲಿ ಎರಡು ಬಾರಿ ಗ್ರೀನ್ ಟೀ ಸೇವಿಸಿ ನೋಡಿ ಶರೀರಕ್ಕೆ ಬೆಚ್ಚನೆಯ ಭಾವ, ಆರೋಗ್ಯ ಉಂಟುಮಾಡುತ್ತದೆ. ಗ್ರೀನ್ ಟೀಯಲ್ಲಿ ಹೇರಳವಾಗಿ ಲಭಿಸುವ ಪೋಷಕಾಂಶಗಳಲ್ಲಿ ಎಪಿಗಾಲ್ಲೋಕಾ ಟೆಚಿನ್ ಎನ್ನುವುದು ಅತ್ಯಂತ ಶಕ್ತಿಯುತ ಆ್ಯಂಟಿ ಆ್ಯಕ್ಸಿಡೆಂಟ್ ಶರೀರದಲ್ಲಿ ಪ್ರವೇಶಿಸುವ ಕ್ಯಾನ್ಸರ್ ಪ್ರೇರಕಗಳ ವಿರುದ್ಧ ಹೋರಾಡಿ ಬರದಂತೆ ತಡೆಗಟ್ಟುತ್ತದೆ. ಹೃದಯದ ಆರೋಗ್ಯವನ್ನು ಕಾಪಾಡುತ್ತದೆ ಎನ್ನುತ್ತದೆ ಅಧ್ಯಯನಗಳು.



- ಶರೀರಕ್ಕೆ ಹಾನಿವುಂಟು ಮಾಡುವ ಕೊಲೆಸ್ಟ್ರಾಲ್, ಟ್ರೆಗ್ಲಿ ಸಿರೈಡ್ಸ್, ಫೈಬೋನೋಜನ್ ನಂತಹವನ್ನು ದೂರ ಮಾಡುತ್ತದೆ. ಶರೀರದಲ್ಲಿ ಉತ್ತಮ ಕೊಲೆಸ್ಟ್ರಾಲ್ ಹೆಚ್ಚಿಸುವ ಶಕ್ತಿ ಟೀಗಿದೆ.
- ತೂಕ ಕಡಿಮೆಯಾಗಬೇಕೆಂದು ತಿಳಿದಿದ್ದೀರಾ. ತಡವೇಕೆ ಗ್ರೀನ್ ಟೀ ಸೇವಿಸಿ ಕೆಲೋರಿಗಳು ಖರ್ಚಾಗುತ್ತದೆ. ಹೊಟ್ಟೆಯ ಭಾಗದಲ್ಲಿ ಶೇಕರಣೆ-ಯಾಗಿರುವ ಕೊಬ್ಬನ್ನು ಕರಗಿಸುತ್ತದೆ. ಜೀವಕ್ರಿಯೆ ವೇಗ ಹೆಚ್ಚಿಸುತ್ತದೆ. ಟೀಯಲ್ಲಿರುವ ಕಾಟೆಚಿನ್, ಕೆಫಿನ್, ಥಿಯಾನೈನ್-ನಂತಹ ಪದಾರ್ಥಗಳು ಅದಕ್ಕೆ ಕಾರಣ.
- ಶರೀರಕ್ಕೆ ತೇವ ದೊರಕಬೇಕೆಂದರೆ ನೀರು ಕುಡಿದರೆ ಸಾಕು ಎಂದು-ಕೊಳ್ಳುತ್ತಾರೆ. ಆದರೆ ಗ್ರೀನ್ ಟೀ ಸಹ ಶರೀರಕ್ಕೆ ನೀರಿನಂತೆ ತೇವ ನೀಡುತ್ತದೆ. ಅಷ್ಟೇ ಅಲ್ಲದೆ ಶರೀರದ ದ್ರವ ಪದಾರ್ಥಗಳ ಮಟ್ಟ ನಿಲ್ಲುವಂತೆ ಮಾಡುತ್ತದೆ. ಡಿಹೈಡ್ರೇಷನ್ ಆಗದಂತೆ ತಡೆಗಟ್ಟುತ್ತದೆ.
- ದಂತ ಸಮಸ್ಯೆಗಳಿಗೆ ಕಾರಣವಾಗುವ ಬ್ಯಾಕ್ಟೀರಿಯಾಗಳನ್ನು ನಿರ್ಮೂಲನೆ ಮಾಡಲು ವಿಶೇಷ ಗುಣ ಇದರಲ್ಲಿದೆ. ಆದ್ದರಿಂದಲೇ ಜಪಾನಿಯರು ಈಗಲೂ ಊಟವಾದ ಬಳಿಕ ಟೀ ಕುಡಿಯುವುದಕ್ಕೆ ಆದ್ಯತೆ ನೀಡುತ್ತಾರೆ. ಮಕ್ಕಳಲ್ಲಿಯೂ ಈ ಅಭ್ಯಾಸ ಬೆಳೆಯಲು ಪ್ರಯತ್ನಿಸುತ್ತಾರೆ
- ಗ್ರೀನ್ ಟೀಯಲ್ಲಿ ಹೇರಳವಾಗಿ ದೊರೆಯುವ ಪಾಲಿಫಿನಾಲ್ಸ್ ಫ್ಲವಿನಾಯಿಡ್ ರೋಗನಿರೋಧಕ ಶಕ್ತಿಯನ್ನು ಗಟ್ಟಿಗೊಳಿಸುತ್ತದೆ. ಇದರಿಂದ ಅನಾರೋಗ್ಯಗಳು ಹತ್ತಿರ ಸುಳಿಯದು.

# ಮಲ್ಲೇಪುರಂ 65ರ ಅಭಿನಂದನೆ

ಕನ್ನಡ ಸಾಹಿತ್ಯ ಪರಿಷತ್‌ನ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸಿವಿಜಿ ಇಂಡಿಯಾ ಮತ್ತು ದರೇಸಾ ಪಬ್ಲಿಕೇಷನ್ ಆಯೋಜಿಸಿದ್ದ ಸಮಾರಂಭದಲ್ಲಿ ನವದೆಹಲಿಯ ರಾಷ್ಟ್ರೀಯ ಸಂಸ್ಕೃತ ಸಂಸ್ಥಾನದ ಶಾಸ್ತ್ರ ಚೂಡಾಮಣಿ ಗೌರವಕ್ಕೆ ಭಾಜನರಾದ ಪ್ರೋ॥ಮಲ್ಲೇಪುರಂ ಜಿ ವೆಂಕಟೇಶರವರನ್ನು ಕರ್ನಾಟಕ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶ ಡಾ.ಎನ್ ಕುಮಾರ್ ಅಭಿನಂದಿಸಿದರು. ಇದೇ ಸಂದರ್ಭದಲ್ಲಿ ಪ್ರೋ॥ಮಲ್ಲೇಶ್ವರಂ ಬದುಕು ಬರಹ ಮತ್ತು "ಕೂಡು ಕಟ್ಟುವ ಬಗೆ" ಪುಸ್ತಕ ಲೋಕಾರ್ಪಣೆಯ ಕಾರ್ಯಕ್ರಮದಲ್ಲಿ ಸಂಪಾದಕ ಜೀರಿಗೆ ಲೋಕೇಶ್ ರವರನ್ನು ಗೌರವಿಸಿಲಾಯಿತು.









ಬೆಂಗಳೂರಿನ ಇಸ್ಕಾನ್ ನವರು ಇಸ್ಕಾನ್ ಸಂಸ್ಥಾಪಕ ಶ್ರೀಲ ಪ್ರಭುಪಾದರ ಕುರಿತು ಡಾ. ಬಾಬು ಕೃಷ್ಣಮೂರ್ತಿರವರು ರಚಿಸಿರುವ ಕಾದಂಬರಿ "ಮಹಾಸಾಧಕ"ದ ಅವಲೋಕನ ಕಾರ್ಯಕ್ರಮ ಉಡುಪಿಯ ಶ್ರೀಕೃಷ್ಣ ಮಠದ ರಾಜಾಂಗಣದಲ್ಲಿ ಏರ್ಪಡಿಸಿದ್ದರು.

ಪರ್ಯಾಯ ಪೇಜಾವರ ಮಠದ ಶ್ರೀ ವಿಶ್ವೇಶ ತೀರ್ಥರಿಗೆ ಅಮರ ಬಾಪು ಚಿಂತನದ ಸ್ಮರಣಿಕೆಯನ್ನು ನೀಡುತ್ತಿರುವ ಸಂಪಾದಕರು.

# ಸ್ವಾತಂತ್ರ್ಯ ಹೋರಾಟದ ಪುಟಗಳಿಂದ...



## ನಾಡ ರಕ್ಷಕ ಸಂಗೊಳ್ಳಿರಾಯಣ್ಣ

ಕಿತ್ತೂರು ರಾಣಿ ಚೆನ್ನಮ್ಮ ಹಾಗೂ ಸಂಗೊಳ್ಳಿರಾಯಣ್ಣ (1795–1830) ಬ್ರಿಟಿಷರ ವಿರುದ್ಧ ನಡೆಸಿದ ಅಪ್ರತಿಮ ಹೋರಾಟದ ಕಥೆ ಕನ್ನಡಿಗರ ಜನಮನದಲ್ಲಿ ಚಿರಸ್ಥಾಯಿಯಾಗಿದೆ. ಇಂದು ಕರ್ನಾಟಕದ ಜನಮನದಲ್ಲಿ ಸ್ವಾಭಿಮಾನ ಶೂರತ್ವಕ್ಕೆ ಆದರ್ಶವಾಗಿ ಜನಮನದಲ್ಲಿ ಭದ್ರವಾಗಿ ರಾಯಣ್ಣ ನೆಲೆಯೂರಿರುವವನು. ಲಾವಣಿ ನಾಟಕ, ಕಥೆ ಮುಂತಾದ ಪ್ರಕರಣಗಳಲ್ಲಿ ಅವನ ಚರಿತ್ರೆಯನ್ನು ಜನ ಮನತುಂಬಿ ವರ್ಣಿಸಿದ್ದಾರೆ.

ಸಂಗೊಳ್ಳಿರಾಯಣ್ಣ ಕಿತ್ತೂರು ನಾಡಿನ ರಕ್ಷಣೆಗಾಗಿ, ರಾಣಿ ಚೆನ್ನಮ್ಮನ ಬಂಡನಾಗಿ ರಾಜ್ಯದ ಉಳಿವಿಗಾಗಿ, ಆತ್ಮಾರ್ಪಣೆ ಮಾಡಿಕೊಂಡಿದ್ದು ರಕ್ತಾಕ್ಷರದಿಂದ ಬರೆದ ಘಟನೆ. ಸಂಗೊಳ್ಳಿರಾಯಣ್ಣ ಅಂಗರಕ್ಷಕನಿಂದ ನಾಡರಕ್ಷಕನಾಗಿ ಪರಿಣಮಿಸಿ ಇತಿಹಾಸ ನಿರ್ಮಾಪಕನಾದನು.

## ತಿರಂಗದ ಚರಿತ್ರೆ



ನಮ್ಮ ರಾಷ್ಟ್ರಧ್ವಜವನ್ನು ವಿನ್ಯಾಸಿಸಿದವರು ಆಂಧ್ರ ಪ್ರದೇಶದ ಸ್ವಾತಂತ್ರ್ಯ ಹೋರಾಟಗಾರರಾದ **ಪಿಂಗಾಲಿ ವೆಂಕಯ್ಯನವರು**. ಗಣತಂತ್ರ ದಿವಸ ಹಾಗೂ ಸ್ವಾತಂತ್ರ್ಯ ದಿವಸದಂದು ಮಾತ್ರ ರಾಷ್ಟ್ರಧ್ವಜವನ್ನು ಹಾರಿಸಲು ಭಾರತೀಯ ನಾಗರೀಕರಿಗೆ ಅನುಮತಿಯಿತ್ತು. ಆದರೆ 2002 ರ ಜನವರಿ 15 ರಿಂದ ನಾಗರೀಕರು ಪ್ರತಿ ದಿವಸವು ರಾಷ್ಟ್ರ ಧ್ವಜವನ್ನು ಹಾರಿಸಲು ಅನುಮತಿ ನೀಡಲಾಯಿತು.

ನಮ್ಮ ರಾಷ್ಟ್ರ ಧ್ವಜವನ್ನು 1947ರ ಜುಲೈ 22 ರಂದು ಭಾರತದ ಸಂವಿಧಾನ ಪರಿಷತ್ತು ಸ್ವೀಕರಿಸಿತು. ದೆಹಲಿಯ ಕೆಂಪು ಕೋಟೆಯ ಮೇಲೆ 1947ರ ಆಗಸ್ಟ್ ಪ್ರಥಮ ಬಾರಿಗೆ ಧ್ವಜವನ್ನು ಏರಿಸಿದರು.

## ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು

**– ಬಾಲಗಂಗಾಧರ ತಿಲಕ್**



ತಿಲಕರ ತ್ಯಾಗ ಮತ್ತು ಆತ್ಮ ಬಲಿದಾನಗಳು ಅವರ ಸಾಮರ್ಥ್ಯಕ್ಕೆ ತಕ್ಕುದಾಗಿದ್ದವು. ಅವರು ದಣಿವರಿಯದ ಕಾರ್ಯಕರ್ತರು ಮತ್ತು ಆಂದೋಲನದ ಸಂಘಟಕರಲ್ಲದೇ ಅದ್ಭುತ ಬರಹಗಾರರಾಗಿದ್ದರು. ಅವರು ವೈರುಧ್ಯದ ಹೇಳಿಕೆಗಳಿಗೆ ಪ್ರಸಿದ್ಧರಾಗಿದ್ದುದೂ ಉಂಟು. ಅಂದಿನ ದಿನಗಳಲ್ಲಿ ಅಪ್ರಿಯವಾದ ವಿಷಯಗಳ ಸಮರ್ಥನೆಯಲ್ಲಿಯೇ ಅವರ ರಾಜಕೀಯ ಜೀವನದ ಬಹುಪಾಲು ಕಳೆಯಿತೆನ್ನಬಹುದು.

# ಪ್ರಾಚೀನ ಸ್ಫೂರ್ತಿಯ "ರಾಷ್ಟ್ರಲಾಂಛನ"



सत्यमेव जयते

ಅಸಂಖ್ಯಾತ ದೇಶಭಕ್ತರ ತ್ಯಾಗ ಬಲಿದಾನದಿಂದಾಗಿ ಸ್ವತಂತ್ರ ರಾಷ್ಟ್ರವಾದ "ಭಾರತ"ಕ್ಕೆ ರಾಷ್ಟ್ರಸರ್ವಸ್ವದ ಸಂಕೇತವಾಗಿ "ತ್ರಿವರ್ಣ ಧ್ವಜ"ವನ್ನು, ದೇಶದ ಹಿರಿಮೆಯನ್ನು ಅರಹುವ "ರಾಷ್ಟ್ರಗೀತೆ"ಯನ್ನು ಅಳವಡಿಸಿಕೊಳ್ಳಲಾಯಿತು. ಅದರೊಂದಿಗೆ ಸ್ವಾತಂತ್ರ್ಯದ ಅಸ್ಮಿತೆ ಹಾಗೂ ಸಾರ್ವಭೌಮತ್ವದ ಸೂಚಕವಾಗಿ **"ಸಿಂಹ ಶೀರ್ಷವನ್ನು"** ರಾಷ್ಟ್ರ ಲಾಂಛನವಾಗಿ ಆಯ್ದುಕೊಳ್ಳಲಾಯಿತು.

**ಸಿಂಹಶೀರ್ಷ** : ದೇವನಾಂಪ್ರಿಯ ಎಂದು ಪ್ರಸಿದ್ಧಿಯಾದ ಅಶೋಕ ಚಕ್ರವರ್ತಿಯ ಕಾಲದಲ್ಲಿ(ಕ್ರಿ.ಪೂ.3 ಶತಮಾನ) ಭಾರತೀ ವಾಸ್ತುಶಿಲ್ಪ ಮತ್ತು ಶಿಲ್ಪಕಲೆಗಳು ಅಮೂಲ್ಯವಾದ ಪ್ರಗತಿ ಸಾಧಿಸಿದವು ವಿಶ್ವಪ್ರೇಮ, ಸದ್ವರ್ತನೆ ಮತ್ತು ಅಧ್ಯಾತ್ಮಿಕತೆಯನ್ನು, ಸಾಧಿಸಿ ಮೈತ್ರಿ ಬಲದಿಂದಲೇ ಸಾಮ್ರಾಜ್ಯ ಪಾಲಿಸಿದ ಅಶೋಕನು ನಾಡಿಗೆ ಉನ್ನತ ಸಂಸ್ಕೃತಿ ನೀಡಿದ ಚರಿತ್ರಾರ್ಹ ಪ್ರಭುವಾಗಿದ್ದಾನೆ. ಸಾರನಾಥದಲ್ಲಿರುವ ಈ ಚಕ್ರವರ್ತಿಯ ಶಿಲ್ಪ ಕಲಾಸ್ತಂಭವು ನಮ್ಮ ಪ್ರಾಚೀನ ಪರಂಪರೆಯ ಸ್ಫೂರ್ತಿ ಹಾಗೂ ಪ್ರತಿಬಿಂಬವಾಗಿದೆ.

**ಸತ್ಯಮೇವ ಜಯತೆ** : ನಮ್ಮ ರಾಷ್ಟ್ರೀಯ ಲಾಂಛನದಲ್ಲಿ ಸಿಂಹಶೀರ್ಷ ಹಾಗೂ ಧರ್ಮಚಕ್ರವಿದ್ದು ಕೆಳಭಾಗದ ಗಂಟೆಯಾಕಾರದ ಕಮಲ ಇರುವುದಿಲ್ಲ. ಧರ್ಮಚಕ್ರ ಪೀಠದ ಕೆಳಗೆ ಮೂಂಡಕ ಉಪನಿಷತ್ ನಿಂದ ಆಯ್ದ ಸತ್ಯಮೇವ ಜಯತೆ (ಸತ್ಯವೇ ಜಯಿಸುತ್ತದೆ) ಎಂಬ ವಾಕ್ಯವನ್ನು ದೇವನಾಗರ ಲಿಪಿಯಲ್ಲಿ ಕೆತ್ತಲಾಗಿದೆ.

**ಧರ್ಮಚಕ್ರ ಪರಿವಾರ** : ಅಶೋಕ ಸ್ತಂಭದಲ್ಲಿಯ ಧರ್ಮಚಕ್ರದೊಂದಿಗಿರುವ ಪ್ರಾಣಿಗಳಿಗೆ ವೈಶಿಷ್ಟ್ಯಪೂರ್ಣವಾದ ಅರ್ಥವನ್ನು ವಿದ್ವಾಂಸರು ಮಂಡಿಸುತ್ತಾರೆ. ಕಾಡಿನಲ್ಲಿ ರಾಜ ಠೀವಿಯಿಂದ ಗಂಭೀರವಾಗಿ ಹೆಜ್ಜೆ ಹಾಕುವ ಆನೆ, ಅಸಾಮಾನ್ಯ ದೇಹ, ಕಣ್ಣು ಸಣ್ಣದಾದರೂ ದೃಷ್ಟಿ ತೀಕ್ಷ ವಾಗಿರುವ ಆನೆಯನ್ನು ರಾಜರು ಯುದ್ಧಕಾಲದಲ್ಲಿ ಬಳಸುತ್ತಿದ್ದರು. ಮೈತುಂಬಾ ಉಕ್ಕಿನ ಉಂಡೆಗಳ ಕಠಿಣ ಮಾಂಸಖಂಡಗಳ ಗೂಳಿ ಹಸುಗಳ ನಾಯಕ ಅದರ ಕೊಂಬು ಸಶಕ್ತ ಆಯುಧ, ಓಡಿದರೆ ಮಿಂಚು ಹರಿದಂತೆ ಇನ್ನು ಕುದುರೆ ತನ್ನ ವೇಗದ ಓಟಕ್ಕೆ ಬಲು ಪ್ರಸಿದ್ಧಿಯಾದುದು. ಯಜಮಾನನ ಆಜ್ಞೆ ಅರಿತು ಗುರಿ ತಲುಪುವುದರಲ್ಲಿ ಅದು ನಿಸ್ಸೀಮವಾದುದು. ಸಿಂಹವು ಕಾಡಿನ ಮೃಗಗಳ ರಾಜ. ಗರ್ಜನೆಯಿಂದ ಸಿಂಹಬಲ ತೋರುವ ಸಿಂಹಕ್ಕೆ ಪ್ರಾಣಿಗಳೇ ಏಕೆ ಮನುಷ್ಯರು ಭಯ ಬೀಳುತ್ತಾರೆ. ಈ ರೀತಿಯಿಂದಾಗಿ ತಮ್ಮ ದೇಹ, ಶಕ್ತಿ, ಧ್ವನಿ ಮತ್ತು ನಡತೆಯಿಂದ ಈ ಪ್ರಾಣಿಗಳು ಹೆಸರಾದವು. ಈ ಕೆತ್ತನೆ ಪ್ರಯೋಗ ನೋಡಿದರೆ ಕಂಬದ ಅಲಂಕಾರದಲ್ಲಿ ಕೆತ್ತಿದ ನಾಲ್ಕು ಪ್ರಾಣಿಗಳು, ಇತರರಿಗಿಂತ ಅಧಿಕ ಶಕ್ತಿ ಪಡೆದವುಗಳಾಗಿದ್ದು ಅವು ಮಹಾಪುರುಷರನ್ನು ಸಂಕೇತಿಸುತ್ತದೆ ಎಂಬುದನ್ನು ಕಾಣಬಹುದು. ಈ ಮಹಾಪುರುಷರು ಮಾಡಬೇಕಾದ ಕೆಲಸವನ್ನು "ಧರ್ಮ" ಎಂದು ಕರೆಯುತ್ತಾರೆ. ಅವರ ಈ ಕೆಲಸವನ್ನು ಸದಾ ಮಾಡುತ್ತಲೆ ಇರಬೇಕು. ಅದು ಮುಗಿಯಿತು ಎಂದು ನಿಲ್ಲಿಸಲಾಗುವುದಿಲ್ಲ. ಆದ್ದರಿಂದ ಈ ಧರ್ಮವನ್ನು ನಿರಂತರ ಚಾಲನೆಯಲ್ಲಿರುವ ಚಕ್ರದ ಆಕಾರದಲ್ಲಿ ಚಿತ್ರಿಸಿದ್ದಾರೆ.

ಆದ್ದರಿಂದ ಅದು ಧರ್ಮ ಚಕ್ರ. ಸಿಂಹ ಶೀರ್ಷದ ಅಡಿ ಪೀಠದಲ್ಲಿ ಒಂದೊಂದು ಪ್ರಾಣಿಗೂ ಹಿಂದೆ ಮುಂದೆ ಚಕ್ರವಿದೆ. ಮಹಾಪುರುಷರು ಹಿಂದೆ ಹಾಗೂ ಮುಂದೆ ಸಹ ಧರ್ಮ ಪಾಲಿಸಬೇಕು. ಸದಾ ಧರ್ಮದ ನಡುವೆ ನಿಂತು ನಡೆದರೆ ಮಾತ್ರ ಅವರು ಮಹಾಪುರುಷರು ಎಂಬುದು ಇಲ್ಲಿಯ ತಾತ್ಪರ್ಯ. ನಾಲ್ಕು ಸಿಂಹಗಳು ಧರ್ಮ ಚಕ್ರದ ಮೇಲೆ ಸ್ಥಿರವಾಗಿ ನಿಂತು ಪ್ರತಿಯೊಂದು ದಿಕ್ಕಿಗೂ ಬಾಯಿ ತೆರೆದು ಲೋಕವನ್ನು ಎಚ್ಚರಿಸುತ್ತವೆಯಲ್ಲದೇ, ಒಂದಕ್ಕೊಂದು ಬೆನ್ನಿಗೆ ಬೆನ್ನು ಕೊಟ್ಟು ಅನ್ಯೋನ್ಯವಾಗಿ ನಿಂತು ಏಕತೆಯನ್ನು ಬಿಂಬಿಸುತ್ತದೆ ಎಂದು ವಿದ್ವಾಂಸರು ವಿಶ್ಲೇಷಿಸಿದ್ದಾರೆ.

**ನಿರಂತರ ಚಲನೆ** : ಸೃಷ್ಟಿ, ಸ್ಥಿತಿ, ಲಯಗಳನ್ನು ಪ್ರತಿಪಾದಿಸುವ ಧರ್ಮಚಕ್ರ ಎಲ್ಲಿಯೂ ನಿಲ್ಲದೇ ನಿರಂತರವಾಗಿ ನಡೆಯುವ ಚಲನೆಯ ಪ್ರಕ್ರಿಯೆಯನ್ನು ಅರ್ಥೈಸುತ್ತದೆ. ಈ ಚಿತ್ರದಲ್ಲಿರುವ 24 ಅರಗಳು ದಿನದ 24 ಗಂಟೆಗಳನ್ನು ಸಂಕೇತಿಸಿ ಬದುಕಿನಲ್ಲಿ ಏರಿಳಿತಗಳು ಸ್ವಾಭಾವಿಕ, ಸದಾಕಾಲ ಒಂದೇ ಸಮನಾಗಿದ್ದು ಚಕ್ರದ ಹಾಗೆ ಮುಂದೆ ಮುಂದೇ ಸಾಗಬೇಕೆಂಬುವ ಬದುಕಿನ ತಿರುಳು ಇದರಲ್ಲಿದೆ ಎಂದು ಸಹ ವಿದ್ವಾಂಸರು ಅರ್ಥೈಸುತ್ತಾರೆ.

**ತಿರಂಗದ ಚರಿತ್ರೆ** : ನಮ್ಮ ರಾಷ್ಟ್ರಧ್ವಜವನ್ನು ವಿನ್ಯಾಸಿಸಿದ'ವರು ಆಂಧ್ರ ಪ್ರದೇಶದ ಸ್ವಾತಂತ್ರ್ಯ ಹೋರಾಟಗಾರರಾದ ಪಿಂಗಾಲಿ ವೆಂಕಯ್ಯನವರು. ಗಣತಂತ್ರ ದಿವಸ ಹಾಗೂ ಸ್ವಾತಂತ್ರ್ಯ ದಿವಸದಂದು ಮಾತ್ರ ರಾಷ್ಟ್ರಧ್ವಜವನ್ನು ಹಾರಿಸಲು ಭಾರತೀಯ ನಾಗರೀಕರಿಗೆ ಅನುಮತಿಯಿತ್ತು. ಆದರೆ 2002 ರ ಜನವರಿ 15 ರಿಂದ ನಾಗರೀಕರು ಪ್ರತಿ ದಿವಸವು ರಾಷ್ಟ್ರ ಧ್ವಜವನ್ನು ಹಾರಿಸಲು ಅನುಮತಿ ನೀಡಲಾಯಿತು. ದೆಹಲಿ ಉಚ್ಛ ನ್ಯಾಯಾಲಯವು ರಾಷ್ಟ್ರಧ್ವಜವನ್ನು ಪ್ರದರ್ಶಿಸುವುದು ಪ್ರತಿಯೊಬ್ಬ ಪ್ರಜೆಯ ಹಕ್ಕು ಎಂದು ಆದೇಶಿಸಿತು.

**ನಮ್ಮ ರಾಷ್ಟ್ರ ಧ್ವಜವನ್ನು 1947ರ ಜುಲೈ 22 ರಂದು ಭಾರತದ ಸಂವಿಧಾನ ಪರಿಷತ್ತು ಸ್ವೀಕರಿಸಿತು. ದೆಹಲಿಯ ಕೆಂಪು ಕೋಟೆಯ ಮೇಲೆ 1947ರ ಆಗಸ್ಟ್ ಪ್ರಥಮ ಬಾರಿಗೆ ಧ್ವಜವನ್ನು ಏರಿಸಿದರು.**



# ವಿದುರಾಶ್ವತ್ಥದಲ್ಲಿ ಸ್ವಾತಂತ್ರ್ಯ ಸ್ಮಾರಕ

ದಕ್ಷಿಣ ಆಫ್ರಿಕಾದಲ್ಲಿ ಗಾಂಧೀಜಿಯವರು ನಡೆಸಿದ ಹೋರಾಟಗಳು ಮತ್ತು ಅಲ್ಲಿನ ಯಶೋಗಾಥೆಯು ಭಾರತದಲ್ಲಿ ಅವರು ಅತ್ಯಂತ ಪ್ರಭಾವಶಾಲಿ ನಾಯಕನಾಗಿ ಹೆಜ್ಜೆ ಮೂಡಿಸಲು ಕಾರಣವಾಯಿತು. ಅಂತಹ ಚಳುವಳಿಗಳಲ್ಲಿ ಧ್ವಜ-ಸತ್ಯಾಗ್ರಹ ಚಳವಳಿಯೂ ಒಂದು.

ಗಾಂಧೀಜಿಯವರ ನೇತೃತ್ವದಲ್ಲಿ ಕಾಂಗ್ರೆಸ್ 1923ರ ನಾಗಪುರ ಅಧಿವೇಶನದಲ್ಲಿ ಧ್ವಜ-ಸತ್ಯಾಗ್ರಹವನ್ನು ಹಮ್ಮಿಕೊಳ್ಳುವ ತಿರ್ಮಾನವನ್ನು ಕೈಗೊಂಡಿತು. ಕಾಂಗ್ರೆಸ್ ಧ್ವಜವು ರಾಷ್ಟ್ರೀಯತೆಯ, ಸ್ವಾತಂತ್ರ್ಯದ ಮತ್ತು ನಾಗರಿಕ ಹಕ್ಕುಗಳ ಸಂಕೇತವಾಗಿಯೂ ಬ್ರಿಟಿಷರ ದರ್ಪ ಮತ್ತು ದೌರ್ಜನ್ಯದ ಆಳ್ವಿಕೆಯನ್ನು ಧಿಕ್ಕರಿಸುವ ಸ್ವಾಭಿಮಾನಿ ರಾಷ್ಟ್ರೀಯ ಚಳುವಳಿಯಾಗಿಯೂ ಮೈದಳೆಯಿತು.

ದೇಶದ ಬಹುತೇಕ ಭಾಗಗಳಲ್ಲಿ ಇಂತಹ ಪ್ರತಿರೋಧದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಂತೆಯೇ 1938ರಲ್ಲಿ ಮೈಸೂರು ಪ್ರಾಂತ್ಯದ ಶಿವಪುರದಲ್ಲೂ ಧ್ವಜ-ಸತ್ಯಾಗ್ರಹವನ್ನು ಹಮ್ಮಿಕೊಳ್ಳಲಾಯಿತು. ಒಂದು ಅರ್ಥದಲ್ಲಿ ಈ ಸತ್ಯಾಗ್ರಹವು ಕಾರ್ಯಕರ್ತರಿಗೆ ಸಾಹಸದ ಪ್ರಯೋಗವೂ ಸ್ವಲ್ಪಮಟ್ಟಿಗೆ ಅಗ್ನಿಪರೀಕ್ಷೆಯೂ ಆಗಿತ್ತು. ಆತಂಕದ ಸನ್ನಿವೇಶವಿದ್ದರೂ ಅಹಿಂಸಾತ್ಮಕವಾಗಿ ಮುಕ್ತಾಯಗೊಂಡ ಇದರ ಯಶಸ್ವಿನಿಂದ ಉತ್ತೇಜಿತರಾದ ಅವಿಭಜಿತ ಕೋಲಾರ ಜಿಲ್ಲೆಯ ಕಾಂಗ್ರೆಸ್ ಮುಖಂಡರುಗಳು ತಮ್ಮ ಹೋರಾಟಕ್ಕೆ ಹೆಚ್ಚು ಜನಬೆಂಬಲ ಗಳಿಸುವ ಉದ್ದೇಶದಿಂದ ವಿದುರಾಶ್ವತ್ಥದಲ್ಲಿಯೂ ಧ್ವಜ ಸತ್ಯಾಗ್ರಹವನ್ನು ಹಮ್ಮಿಕೊಂಡರು.

ಅದೇ ವರ್ಷ ವಿದುರಾಶ್ವತ್ಥದ ಜಾತ್ರೆ ಸಂದರ್ಭದಲ್ಲಿ ಇಲ್ಲಿ ಆಯೋಜಿಸಿದ್ದ ಬೃಹತ್ ಧ್ವಜ-ಸತ್ಯಾಗ್ರಹ ಕಾರ್ಯಕ್ರಮದಲ್ಲಿ (ಏಪ್ರಿಲ್ 25, 1938) ಸೇರಿದ್ದ ಸಾವಿರಾರು ಜನರ ಮೇಲೆ ವಿವೇಚನಾರಹಿತ ಅಧಿಕಾರಿಗಳ ಆದೇಶದ ಮೇರೆಗೆ ಹಲವು ಸುತ್ತು ಗುಂಡಿನ ಮಳೆ ಕರೆಯಲಾಯ್ತು. ಸುಮಾರು 30ಕ್ಕೂ ಹೆಚ್ಚು ಜನರು ಮಡಿದು ನೂರಾರು ಜನರು ಗಾಯಗೊಂಡರು. ಸರ್ಕಾರವು ಮೃತರ ಸಂಖ್ಯೆಯು ಕೇವಲ ಒಂಬತ್ತು ಎಂದು ಘೋಷಿಸಿದರೂ ಪ್ರತ್ಯಕ್ಷದರ್ಶಿಗಳು ಮೃತರ ಸಂಖ್ಯೆಯು 32ರಿಂದ 35 ಎಂದು ಹೇಳುತ್ತಾರೆ. ಈ ಸನ್ನಿವೇಶಕ್ಕೂ ಜಲಿಯನ್ ವಾಲಾಬಾಗ್ ನಲ್ಲಿ ನಡೆದ ಹತ್ಯಾಕಾಂಡಕ್ಕೂ ಸ್ಥೂಲ ಹೋಲಿಕೆ ಇರುವ ಕಾರಣ ಈ ದುರ್ಘಟನೆಯು ಜರುಗಿದ ಸ್ಥಳವಾದ ವಿದುರಾಶ್ವತ್ಥ, ಕರ್ನಾಟಕದ/ದಕ್ಷಿಣ ಭಾರತದ ಜಲಿಯನ್ ವಾಲಾಬಾಗ್ ಎಂದು ಚರಿತ್ರಕಾರರಿಂದ ಪರಿಗಣಿಸಲ್ಪಟ್ಟಿದೆ.

**ವೀರಸೌಧ** : "ವೀರಸೌಧ" ಕಟ್ಟಡವು ಚರಕಾಕೃತಿಯಲ್ಲಿ ಇದರಲ್ಲಿ ಸ್ವಾತಂತ್ರ್ಯ ಸ್ಮಾರಕ ಸಮುಚ್ಚಯದ ಹೃದಯ ಭಾಗವಾಗಿರುವ "ಭಾರತ ಸಾತಂತ್ರ್ಯ ಹೋರಾಟದ ಬೃಹತ್ ಚಿತ್ರ-ಇತಿಹಾಸ ದರ್ಶನ" ಎಂಬ ಚಿತ್ರಪಟ ಗ್ಯಾಲರಿಯು ನಾಲ್ಕು ವರ್ಷಗಳ ವಿನ್ಯಾಸವನ್ನು ನವೀಕರಿಸಲಾಗಿದೆ.

ವಿವಿಧ ಹಂತಗಳು ಮತ್ತು ವಿವಿಧ ಸ್ವರೂಪಗಳಲ್ಲಿ ಸುಮಾರು 189 ವರ್ಷಗಳ ಕಾಲ ಬ್ರಿಟಿಷರ ದಬ್ಬಾಳಿಕೆಯವಿರುದ್ಧ ನಡೆದ ಸುದೀರ್ಘ ಹೋರಾಟಗಳ ಇತಿಹಾಸವನ್ನು ಗ್ಯಾಲರಿಯಲ್ಲಿ ಚಿತ್ರಮಾಲಿಕೆಯಾಗಿ ಹಿಡಿದಿಡುವ ಪ್ರಯತ್ನವನ್ನು ಮಾಡಲಾಗಿದೆ. ಹೀಗಾಗಿ ಗಾಂಧಿ ಮತ್ತು ಪೂರ್ವೋತ್ತರ ಕಾಲಗಳ ಎಲ್ಲ ಪ್ರಮುಖ ಹೆಜ್ಜೆಗಳನ್ನು ನಾವು ಇಲ್ಲಿ ನೋಡುವುದು ಸಾಧ್ಯವಾಗಿದೆ. ಒಂದು ರೀತಿಯಲ್ಲಿ ಇಲ್ಲಿನ ವಿನ್ಯಾಸವು "ನೋಡುತ್ತಾ-ಓದು" ಗುಂಪಿಗೆ ಸೇರಿದ್ದು ಗ್ಯಾಲರಿಯು ಅನನ್ಯವಾದ ಅನುಭವವನ್ನು ನೀಡುತ್ತದೆ.

ಗ್ಯಾಲರಿಯ ಜೊತೆಗೆ ಗ್ರಂಥಾಲಯ ಮತ್ತು ಚಲನಚಿತ್ರ ವೀಕ್ಷಣೆಯ ಸೌಲಭ್ಯವನ್ನು ಕೂಡ ಇಲ್ಲಿ ಒದಗಿಸಲಾಗಿದೆ. ಸ್ವಾತಂತ್ರ್ಯ ಹೋರಾಟಕ್ಕೆ ಮತ್ತು ರಾಷ್ಟ್ರನಿರ್ಮಾಣ ಸಂವಾದಗಳಿಗೆ ಸಂಬಂಧಿದಿದೆ ಆಯ್ಕೆ ಮಾಡಿದ ನೂರಾರು ಪುಸ್ತಕಗಳನ್ನೂ ಗ್ರಂಥಾಲಯದಲ್ಲಿ ಸಂಗ್ರಹಿಸಲಾಗಿದೆ.

# Tryst with Destiny

- Jawaharlal Nehru

'Tryst with Destiny' was a speech delivered by Jawaharlal Nehru, the first Prime Minister of independent India, to the Indian Constituent Assembly in The Parliament, on the eve of India's history. It is considered to be one of the greatest speeches of the 20th century and to be a landmark oration that captures the essence of the triumphant culmination of the largely non-violent Indian independence struggle against the British Empire in India.



Long years ago we made a tryst with destiny, and now the time comes when we shall redeem our pledge, not wholly or in full measure, but very substantially. At the stroke of the midnight hour, when the world sleeps, India will awake to life and freedom. A moment comes, which comes but rarely in history, when we step out from the old to the new, when an age ends, and when the soul of a nation, long suppressed, finds utterance.

It is fitting that at this solemn moment we take the pledge of dedication to the service of India and her people and to the still larger cause of humanity with some pride.

At the dawn of history India started on her unending quest, and trackless centuries which are filled with her striving and the grandeur of her success and her failures. Through good and ill fortunes alike she has never lost sight of that quest or forgotten the ideals which gave her strength. We end today a period of ill fortunes and India discovers herself again.

The achievement we celebrate today is but a step, an opening of opportunity, to the greater triumphs and achievements that await us. Are we brave enough and wise enough to grasp this opportunity and accept the challenge of the future?

Freedom and power bring responsibility. The responsibility rests upon this assembly, a sovereign body representing the sovereign people of India. Before the birth of freedom we have endured all the pains of labour and our hearts are heavy with the memory of this sorrow. Some of those pains continue even now. Nevertheless, the past is over and it is the future that beckons to us now.

That future is not one of ease or resting but of incessant striving so that we might fulfill the pledges we have so often taken and the one we shall take today. The service of India means the service of the millions who suffer. It means the ending of poverty and ignorance and disease and inequality of opportunity.

The ambition of the greatest man of our generation has been to wipe every tear from every eye. That may be beyond us, but as long as there are tears and suffering, so long our work will not be over.

And so we have to labour and to work, and work hard, to give reality to our dreams. Those dreams are for India, but they are also for the world, for all the nations and peoples are too closely knit together today for anyone of them to imagine that it can live apart.

Peace has been said to be indivisible; so is freedom, so is prosperity now, and so also is disaster in this one world that can no longer be split into isolated fragments.

To the people of India, whose representatives we are, we make an appeal to join us with faith and confidence in this great adventure. This is no time for petty and destructive criticism, no time for ill will or blaming others. We have to build the noble mansion of free India where all her children may dwell.

The appointed day has come – the day appointed by destiny – and India stands forth again, after long

